श्रीमज्जयतीर्थयतिकृता

# श्रीमन्न्यायसुधा

श्रीमद्राघवेन्द्रगुरुसार्वभौमकृत 'परिमळ' टिप्पणीसमेता



गुरुभावं व्यञ्जयन्ती भाति श्रीजयतीर्थवाक् ॥

सम्पादकाः

श्री १०८ श्री प्रज्ञाननिधितीर्थश्रीपादाः

मुळबागलु

प्रथमं सम्पुटम्

।। श्रीनिवासो विजयते ।।

श्रीमदानन्दतीर्थभगवत्पादाचार्यविरचित-
श्रीमद्बादरायणप्रणीतब्रह्मसूत्रानुव्याख्यानस्य टीका

## श्रीमज्जयतीर्थयतिकृता

# श्रीमन्न्यायसुधा

श्रीमद्राघवेन्द्रगुरुसार्वभौमकृत 'परिमळ' टिप्पणीसमेता

## प्रथमं सम्पुटम्

द्वितीयाध्यायस्य द्वितीयपादे अन्यथानुमित्यधिकरणपर्यन्तम्

(१-१-१ तः २-२-५ अधिकरणानि)

*सम्पादकाः*

श्री १०८ श्री प्रज्ञाननिधितीर्थश्रीपादाः

(संस्थापकाः - श्रीप्रसन्नराघवेन्द्रस्वामिमठः)

मुळवागलु

Tīkā of Srīmad-Anuvyākhyāna
written by Śrī Madhvācārya on Brahmasūtras

# Śrīman Nyāyasudhā

written by Śrī Jayatīrtharu
with 'Parimala' Tippaṇī of Śrī Rāghavendra Swāmīji

Valume : I - Adhikaraṇas 1-1-1 to 2-2-5

First Edition : 1986
Second Edition : 2011

***Price : Rs. 1750/-*** (for Two volumes).

***Editor :***
**Śrī 108 Śrī Prajñānanidhi Tīrtha Śrīpādaṅgalavaru**
***(Founder : Śrī Prasanna Rāghavendra Swāmī Mutt)***
***Mulbāgalu, Kolar Dist.***

***Published By :***
D. N. Vyasarāja, D. N. Vāsudeva, D. N. Kṛṣṇamūrty
***Śrī Prasanna Rāghavendra Swāmī Mutt***
*Agrahār, Mulbāgalu, Kolar Dist. Mobile No. 98453 36414*

***Copies also available at :***
Sri Narasimha Krupa
No. 358, 2nd A Main, 5th Cross
Srinivasanagar, BSK I Stage
Bangalore 560 050 Ph. 080 - 2669 7128
Mobile : 98445 88759, 94485 38833

***Printed By :***
**Dhananjay Warkhedkar**
at : **Sudhā Mudraṇa**
Śaṅkarpuram, Bangalore - 560 004.
☎ 080-65602836 *Mobile* : 92430 74414

॥ श्री दिग्विजयरामो विजयते ॥

श्रीमज्जगद्गुरु श्रीमध्वाचार्य मूलमहासंस्थानम्

# उ त्त रा दि म ठः

5th Cross, Shankarpuram, Basavanagudi BANGALORE - 560 004 Ph : 080 - 2242 6203

Camp : ಧಾರವಾಡ

॥ ಶ್ರೀಃ ॥

**ಶ್ರೀಮಜ್ಜಗದ್ಗುರು ಶ್ರೀಮನ್ ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಉತ್ತರಾದಿಮಠಾಧೀಶ್ವರರಾದ**

**ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಕರಕಮಲಸಂಜಾತರಾದ**

**ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ**

## ಅನುಗ್ರಹ ಸಂದೇಶ

ಬಾನಗಲಾಗಿ ಬೆಳೆದ ತತ್ತ್ವಜ್ಞಾನ ಪ್ರಪಂಚದಲ್ಲಿ ಸೂರ್ಯನಂತೆ ರಾರಾಜಿಸುವ ಗ್ರಂಥರಾಜ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ರಚಿಸಿದ "ಶ್ರೀಮದನುವ್ಯಾಖ್ಯಾನ". ಪರಾಪರ ತತ್ತ್ವಗಳ ವಿಷಯದಲ್ಲಿ ವೇದವ್ಯಾಸದೇವರ ಭಾವವನ್ನು ಜಗತ್ತಿಗೆ ತಿಳಿಸುವ ಅದ್ವಿತೀಯ ಅಮೃತಕೃತಿ. ವೇದಮತ ವ್ಯಾಸಮತಗಳಿಗೆ ಎದುರಾದ ಸಕಲ ದರ್ಶನಗಳನ್ನು ನಿರಾಕರಿಸುವ ತಪ್ಪು ತಿಳುವಳಿಕೆಗಳನ್ನು ದೂರ ಓಡಿಸುವ ವಜ್ರಕೃತಿ ಶ್ರೀಮದನುವ್ಯಾಖ್ಯಾನ. ಇಂತಹ ಅನುವ್ಯಾಖ್ಯಾನದ ನಿಜವಾದ ಮರ್ಮವನ್ನು ತಿಳಿಸುವ ಮೋಕ್ಷದ ಶರ್ಮವನ್ನು ನೀಡುವ ಮಾಧ್ವರ ಮರ್ಮದಂತೆ ಇರುವ ಯಾರೂ ನರ್ಮದಿಂದ ನೋಡಲಾಗದ ಧರ್ಮಕೃತಿ ಶ್ರೀಮಜ್ಜಯತೀರ್ಥರ "ಶ್ರೀಮನ್ನ್ಯಾಯಸುಧಾ". ಶ್ರೀಮನ್ನ್ಯಾಯಸುಧಾ ಗ್ರಂಥದ ಸೂಕ್ಷ್ಮವಾದ ಪ್ರಮೇಯರಹಸ್ಯಗಳ ಪ್ರಮೆಯನ್ನು ಅಪ್ರಮೇಯನಿಗೆ ಪ್ರೇಮ ಉಂಟಾಗುವಂತೆ ಪ್ರಮೇಯ ಪಿಪಾಸುಗಳಿಗೆ ಪ್ರದಾನ ಮಾಡುವ ಕೃತಿ ಶ್ರೀಮದ್ರಾಘವೇಂದ್ರಸ್ವಾಮಿಗಳವರು ರಚಿಸಿದ "ಶ್ರೀಮನ್ನ್ಯಾಯಸುಧಾಪರಿಮಳ".

ಈ ಮೂರು ಕೃತಿಗಳನ್ನು ವಿದ್ಯಾರ್ಥಿಗಳ ಹಾಗೂ ವಿದ್ವಾಂಸರ ಅನುಕೂಲಕ್ಕಾಗಿ ನಮ್ಮ ಗುರುಗಳ ಪ್ರಿಯ ಶಿಷ್ಯರಾದ ಶ್ರೀಪ್ರಜ್ಞಾನನಿಧಿತೀರ್ಥರು ನಮ್ಮ ಗುರುಗಳ ಆಜ್ಞೆಯಂತೆ ಈಗಾಗಲೇ ಮುದ್ರಣ ಮಾಡಿದ್ದರು. ಈಗ ಪುನಃ ಅವರ ಪೂರ್ವಾಶ್ರಮದ ದೌಹಿತ್ರರಾದ ವ್ಯಾಸರಾಜ, ವಾಸುದೇವ ಮತ್ತು ಕೃಷ್ಣಮೂರ್ತಿ ಇವರು ಪುನರ್ಮುದ್ರಣ ಮಾಡಿ ಪ್ರಕಾಶನ ಮಾಡುತ್ತಿರುವುದು ಬಹಳ ಸ್ತುತ್ಯವಾದ ಕಾರ್ಯ.

ಈ ಕಾರ್ಯದಿಂದ ಪ್ರಸನ್ನರಾದ ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲಸೀತಾಸಮೇತ ಶ್ರೀಮೂಲರಾಮ ಶ್ರೀದಿಗ್ವಿಜಯರಾಮ ಹಾಗೂ ಶ್ರೀವೇದವ್ಯಾಸದೇವರು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ಅನೇಕ ನಾರಾಯಣ ಸ್ಮರಣೆಗಳೊಂದಿಗೆ

ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಶ್ರೀ ಉತ್ತರಾದಿ ಮಠ.

॥ श्रीः ॥

॥ श्रीनिवासाय नमः ॥

# प्रस्तावना

## (प्रथमावृत्तेः प्रस्तावना)

सनीरनीरदप्रख्यं सच्चिदानन्दविग्रहम् ।
रमारमणमीशेशं विठ्ठलं समुपास्महे ॥

आपादमौलिपर्यन्तं गुरूणामाकृतिं स्मरेत् ।
तेन विघ्नाः प्रणश्यन्ति सिद्ध्यन्ति च मनोरथाः ॥

अहो ! महदिदं भागधेयमस्माकं विष्णुपादैकसंश्रितानां सद्वैष्णवानां, यदस्माकं भूदेवानां पीयूषपानं विना श्रमेण सञ्जातमिति । यथा हि अतिमहता परिश्रमेण देवासुरसन्धानेन विघातानन्त्यपरिहारपूर्वकं क्षीरोदधिमथनेन तत्रोद्भूतममृतं, पुनर्विनियोगावसरे भगवान् श्रीमन्नारायणः अतिसुन्दरं मनोहरं स्त्रीरूपं समवधार्य अप्रदायैवाऽसुरेभ्यः, केवलं देवान् पाययित्वा तानमृतान् कारयामास ॥

तथैव, भगवदाज्ञामवलम्ब्य श्रीमदानन्दतीर्थनाम्ना मुख्यः प्राणः भूमण्डलमवतीर्य सद्वैष्णवान् भूदेवानुद्दिधीर्षुः निखिलचराचरप्रपञ्चविलक्षणस्य भगवतो नारायणस्य अपरावतारभूतेन भगवता व्यासेन प्रणीतानि यानि इतिहासपुराणवचनानि वेदवेदाङ्गानुकृतीनि, तानि सर्वाण्यपि सम्यक् समालोड्य, श्रीव्यासप्रणीतानां ब्रह्मसूत्राणां व्याख्यानत्वेन 'अनुव्याख्यानं' सूत्रकाराशयमनुसृत्य व्याख्यानं रचयामास ।

सोऽयमनुव्याख्याननामा कोशः अध्यात्मविद्यादेवतातत्त्वादिबहुरहस्यरत्नानामनर्घ्यो निक्षेपः ॥

उक्तं हि श्रीमदाचार्यस्य साक्षाच्छिष्यभूतैः, श्रीसुब्रह्मण्यशाखिमहोदयानामात्मजैः, श्रीमत् त्रिविक्रमपण्डिता-चार्यैः तत्त्वप्रदीपे– "तस्यैतस्य सर्वश्रुतीतिहासपुराणतन्त्रयुक्तिमूलं, परमात्मतत्त्वविषयनिर्णयात्मकं सूत्रजातं जगति सुरवरपुरस्सरकविजनमनस्सरसिजसमूहसहस्रकिरणेभ्यो गुरुतमभाष्यकारभट्टारकेभ्य एभ्योऽपरः को व्याचक्षीत । किन्तु प्राज्ञतमानामेषामाज्ञामवलम्ब्य आरूढप्रौढदुराधिगममार्गाः कतिचन भाष्यपदानि व्याचिख्यासवः, सूत्रमिह गुरुभिरुदाहृतमुदाहराम एव केवलम्, क्वापि च मुखतो विवृतमपि किमपि पदं अभिमुखविकसितकरकमलविलसिता-ऽऽमलकवदविरतमनुवीक्ष्यमाणसूत्रार्थजातानां दुर्विगाहं अतिमहासमुद्राणां मितपदं चेदं भाष्यं, बह्वर्थमिह कुर्वतां कृपालूनामनुग्रहात् अर्थाक्षिप्तमर्थं प्रतिपादयामः" इति ॥

तत्तादृशस्यैवानुव्याख्यानस्य व्याख्या सेयं 'सुधा'।

यस्यास्सुधायाः पानेन सद्वैष्णवाः देवसध्रीचीना भूसुरा अमृता भवन्ति।

यस्याश्च सुधाया आस्वादनेन स्वस्वरूपानन्दानुभवेन निरन्तरनिरवधिकसुखमनुभवन्तः पुनरावृत्तिरहिताः परममोक्षमनुभवन्तीति निश्चप्रचम्॥

यत्र च अस्यां सुधायां विचित्रतरनानाशक्तिकनिखिलचराचरप्रपञ्चनिर्माणकारणस्य निखिलागमप्रतिपाद्यस्य भगवतस्सर्वेश्वरस्य सर्वोत्तमत्त्वादिकं दृढीकृत्य, भगवतस्स्वरूपं यथावद्विविच्य, परमताशयं सप्रमाणं दूरीकृत्य च करालकलिकालकलुषितान् मिथ्याज्ञानाऽन्यथाज्ञानविशिष्टानस्मान् अत एवाऽन्धीभूतान् सज्जनान् उन्मीलिताक्षांश्चक्रुः परमकृपालवः श्रीमज्जयमुनिवर्याः॥

यथा वा स्वर्लोकवासिनो देवाः देवासुरमथनोद्धृतं पीयूषं पायं पायं केवलममृताः (मरणरहिताः) अभूवन्, तथा भूदेवास्सज्जनाः सुधामिमामनन्यलभ्यां कर्णपुटैः श्रावं श्रावं भक्त्या मनसा च भगवन्तं ध्यायं ध्यायं अमृताः (मुक्ताः) भवन्तीति यत् तत्र, न काचिदपि विचिकित्सा॥

किञ्च सेयं सुधा सदागमगीयमानस्वातन्त्र्यसार्वज्ञादिगुरुतमगुणगणपरिपूर्णपरमानन्दामृतमहार्णवस्य विष्णोः प्रसादमन्तरेण न लभ्यत इति निष्टङ्कितम्। उच्यते ह्यभियुक्तैः "सुधा वा पठनीया वसुधा वा पालनीया" इति॥

सेयं सुधा श्रीमज्जयमुनिवर्यैः श्रीमदाचार्याणां ग्रन्थानां टीकाकरणायैव भूमाववतीर्णैः, अत एव च टीकाचार्याः इति सार्थनामधेयैस्सम्पादिता मनोहरा विराजते॥

एते च महानुभावाः पूर्वस्मिन् जन्मनि श्रीमदाचार्यस्य सेवां चिकीर्षुः इन्द्र एव अंशतः वृषभरूपतामालम्ब्य आचार्याणां निखिलकोशजातभारमुद्वहन्तः प्रत्यहं पाठकाले आचार्यमुखोद्गीर्णं सर्वमपि प्रमेयजातं परमया भक्त्या श्रावं श्रावं करकमलविलसिताऽऽमलकवत् संविदितसकलशास्त्ररहस्यार्थाः, जन्मन्यस्मिन् मानुषतामवाप्य प्रायः विंशतिवर्षदेशीयाः राजकीयसेनासमित्या सह ग्रामाद्बहिरागताः अश्वारूढाः तत्र तत्र सञ्चरणेन नितान्तं श्रान्ताः अत एव पिपासापीडिताः तुरगारूढास्सन्त एव मुखेनैव यदा नदीजलमपिबन्, तदैव श्रीमदाचार्याणां साक्षाच्छिष्यभूताः अद्वैतमातङ्गसिंहायिताः श्रीमदक्षोभ्यमुनिवर्याः पूर्वस्मिन् दिने स्वप्रदृष्टान् पशुवज्जलं पिबन् एतान् "किं पशुः पूर्वदेहे" इति यदाऽपृच्छन्, तदा झटित्येव स्वावतारप्रयोजनं स्मारं स्मारं अनुपदमेव तेषां पदकमलयोर्दण्डवत्प्रणम्य, स्वस्य तुरीयाश्रमपदं ययाचिरे॥

तेऽपि अक्षोभ्यतीर्थवर्याः श्रीमदाचार्योक्तामुक्तिं मनसा स्मरन्तः, तानेतान् शिष्यत्वेन परिगृह्य यथाऽऽचार्योपदिष्टं सर्वाणि शास्त्राण्युपदिदिशुः॥

आश्रमस्वीकारानन्तरं एते च महानुभावाः श्रीजयतीर्थश्रीमच्चरणेति नामभाजाः श्रीमदाचार्यसकाशादेव विदितवेद्याः इदानीमपि साक्षाद्गुरुभिरुक्तं सर्वं शास्त्रजातं मनसिकृत्य, भगवता वायुसूनुना समलङ्कृतं परमपावनतमं यरगोळक्षेत्रमवाप्य श्रीमदाचार्यप्रणीतानां प्रायस्समेषां ग्रन्थानां व्याख्यामकुर्वन्नचिरेणैव कालेन।

तदा श्रीमदाचार्योपदिष्टवचनोदधेर्मथनेनैव समुद्भूतेयं '**न्यायसुधा**'।

निखिलवेदवेदान्तस्मृतीतिहासपुराणप्रमाणविशिष्टात् श्रीमतामाचार्याणां ग्रन्थोदधेस्समुपपन्ना सेयं सुधा पूर्वजन्मनि पशुतामापन्नानां तेषां टीकाचार्याणां इह जन्मनि रोमन्थमाचरन्त इव सुधादिरूपेण बहिराविर्भूता इति निश्चिनुमः ॥

एते च मुनिवर्याः तुरीयाश्रमात्पूर्वं न्यायमीमांसाव्याकरणादिशास्त्रनिचयेषु अकृतभूरिपरिश्रमाः अनधिगत-शास्त्रार्था अपि, दशसु वा द्वादशेषु हायनेषु सुधादिग्रन्थजालानि कथं रचयामासुरिति नितान्तमाश्चर्यमुद्भावयति ॥

आर्षचक्षुस्सम्पन्ना एते मुनिवर्याः केवलमाचार्यग्रन्थव्याख्यानव्याजेन भूमाववतीर्णाः, अत एव टीकाचार्या इति सार्थनामधेयाः, केवलं द्वात्रिंशत्संवत्सरान् भूमावुषित्वा, इदानीं वृन्दावनरूपेण शिष्यवृन्दमनुगृह्णन्तः मल्खेड-क्षेत्रमधिवसन्तीति नः प्रमोदः।

तत्तादृशयास्सुधायाः, मन्त्रालयप्रभुभिः गुरुसार्वभौमैः शिष्यजनतावात्सल्यात् कृतेन परिमलविनियोगेन च सेयं सुधा परिमलविशिष्टेति यत् अनुभूयते – तेन हेम्नः परमामोदो जात इति नितान्तमानन्दतुन्दिला भवेमेति मन्यामहे ॥

इमां च न्यायसुधां परिमलयुक्तां सार्वजनीनसुलभां चिकीर्षुरहं मुळबागलुक्षेत्रस्थश्रीप्रसन्नराघवेन्द्रस्वामिनां मठे वृन्दावनमधितिष्ठतां, सर्वदा श्रीमदाचार्यग्रन्थपठननिष्णातानां श्री १०८ श्रीप्रेक्षानिधितीर्थमहोदयानां चतुश्चत्वा-रिंशत्संवत्सरस्मारकतया, तथा श्री १००८ श्रीपरिमलाचार्याणां प्रतिष्ठापनं च चत्वारिंशत्-हायनस्मारकतया तथैव मदीयसप्ततितमसंवत्सरस्मारकतया च प्रोद्घाटितेति निवेदयन्, सर्वे भक्तजनाः, कोशमिमं स्वीकृत्य पठनपाठन-पूजनादिना, कृतार्थीभूताः श्रीमदाचार्यकृपापात्रीभूताः भवेयुरिति सम्प्रार्थये।

अत्र ग्रन्थे 'गच्छतः स्खलनमि'ति न्यायेन अङ्कनदोषेण वा यदि दोषास्स्युः, तान् मह्यमेव बोधयन्त्विति साञ्जलिबन्धं सम्प्रार्थये ॥

इति बुधजनविधेयः

*हे. कृ. रङ्गनाथाचार्यः*

**(श्री प्रज्ञाननिधितीर्थश्रीपादाः)**

*अध्यक्षाः*

श्रीमदानन्दतीर्थसत्तीर्थोत्साहिनी सभा

श्री प्रसन्नराघवेन्द्रमठः, मुळबागिलु.

॥ ಶ್ರೀ ಬಾದರಾಯಣೋ ವಿಜಯತೇತರಾಮ್ ॥

# ಮುನ್ನುಡಿ

## (ಪ್ರಥಮಾವೃತ್ತಿಯ ಮುನ್ನುಡಿ)

ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ ।
ಜಯತ್ಯಮಿತಸಜ್ಜ್ಞಾನಸುಖಶಕ್ತಿಪಯೋನಿಧಿಃ ॥
ಲಕ್ಷ್ಮೀಲಾವಣ್ಯಪೀಯೂಷಪಾನಪಾತ್ರಾಯಿತೇಕ್ಷಣಃ ।
ಸನೀರನೀರದಶ್ಯಾಮೋ ಪಾತು ವೋ ಭಗವಾನ್ ಹರಿಃ ॥

ಭಾರತೀಯ ಆಧ್ಯಾತ್ಮಿಕ ವೈಚಾರಿಕ ವಾಙ್ಮಯದಲ್ಲಿ ಸೂತ್ರಗಳ ಸ್ಥಾನ ಅತ್ಯಂತ ಮಹತ್ವದ್ದು. ಅನಾದಿ ಕಾಲದಿಂದಲೂ ಅನೇಕ ವಿಧವಾದ ಸೂತ್ರಗಳು ಭಾರತೀಯ ತತ್ವದರ್ಶನಸಾಗರದಲ್ಲಿ ಅಲೆಅಲೆಯಾಗಿ ಬಂದಿರುವದನ್ನು ನಾವು ಕಂಡಿದ್ದೇವೆ. ಧರ್ಮಾಧರ್ಮಗಳಂತಹ ವಿಶಿಷ್ಟ ವಿಷಯಗಳನ್ನು ವಿವರಿಸಹೊರಟ ಪ್ರಾಚೀನತಮವಾದ ಧರ್ಮ-ಗುಹ್ಯ-ಶ್ರೌತಸೂತ್ರಗಳಲ್ಲದೆ ತತ್ವನಿಶ್ಚಯಕ್ಕಾಗಿ ಪ್ರವೃತ್ತವಾದ ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸಾ ಉತ್ತರಮೀಮಾಂಸಾ – ಈ ಷಡ್ದರ್ಶನಗಳಿಗೂ ಸಹ ಸೂತ್ರಗಳೇ ಮೂಲಭೂತವಾಗಿರುವವು. ಕಾಲಕಾಲಕ್ಕೆ ಪೂರ್ವಪಕ್ಷಗಳ ರೂಪದಲ್ಲಿ ಹೊರಬಂದ ಎಲ್ಲ ಸೂತ್ರಗಳ ಅಂತಿಮನಿರ್ಣಯವನ್ನು ಉತ್ತರಮೀಮಾಂಸಾ ಸೂತ್ರಗಳಾದ ಬ್ರಹ್ಮಸೂತ್ರಗಳಲ್ಲಿ ಕಾಣಬಹುದಾಗಿದೆ. ಮಿತವಾದ ಪದಾಕ್ಷರಗಳಿಂದ ಸರ್ವತಸಾರಭೂತವಾದ ತತ್ವವಿಹಿತ ಹಿತಾರ್ಥವನ್ನು ತಿಳಿಸುವ ಶಬ್ದಸಮೂಹಕ್ಕೆ 'ಸೂತ್ರ'ಗಳೆಂದು ಹೇಳುವ ಸಾಮಾನ್ಯ ವಾಡಿಕೆಯುಂಟು.[1] ಆದರೆ ದೇವಾನುದೇವತೆಗಳಿಂದಲೂ ಆದರಣೀಯವಾಗಿ ದೇವಮಾನ್ಯವಾದ ಸೂತ್ರಗಳ ಲಕ್ಷಣವು ಪುರಾಣಗಳಲ್ಲಿ ಈ ರೀತಿಯಾಗಿ ಹೇಳಲ್ಪಟ್ಟಿರುವುದು :-

ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥

"ಪ್ರಸುಕ್ತ ವಿಷಯವನ್ನು ವಿವರಿಸಲು ಉಪಯುಕ್ತವಾದ ಮಿತಾಕ್ಷರಗಳಿಂದ ಕೂಡಿ ಸರ್ವಥಾ ಅರ್ಥಸಂದೇಹಕ್ಕೆ ಅವಕಾಶವನ್ನೀಯದೇ ಅಸಂದಿಗ್ಧವಾಗಿ ಅಪೌರುಷೇಯ ವೇದಗಳಲ್ಲಿಯ ಸರ್ವ(ಬಹು)ಶಾಖಾನಿರ್ಣಯಾತ್ಮಕವಾದ ಸರ್ವಶ್ರೇಷ್ಠವಾದ ಅರ್ಥಪ್ರತಿಪಾದನೆ – ಪ್ರತಿಪಾದಿತವಾದ ಅರ್ಥದ ಪ್ರತಿಷ್ಠಾಪನೆಗೈಯುವ ಶಬ್ದಾರ್ಥದೋಷವಿರಹಿತವಾದ ಪದಸಮೂಹಕ್ಕೆ 'ಸೂತ್ರ'ವೆನ್ನುವರು. "ಶ್ರುತ್ಯರ್ಥನಿರ್ಣಾಯಕಗಳಾದ ಸದ್ಯುಕ್ತಿ ಪ್ರತಿಪಾದನೆಗಾಗಿ ಹೊರಟ ಇಂತಹ ಸೂತ್ರಗಳೇ 'ಬ್ರಹ್ಮಸೂತ್ರಗಳು' ಅಥವಾ 'ಬ್ರಹ್ಮಮೀಮಾಂಸಾಶಾಸ್ತ್ರ. 'ಬ್ರಹ್ಮ' ಎಂದರೆ ವೇದ. ಅಥವಾ ವೇದಗಳಿಂದ ಪ್ರತಿಪಾದ್ಯನಾದ ಪರಬ್ರಹ್ಮ. ವೇದಾರ್ಥನಿರ್ಣಾಯಕ ಅಥವಾ ಸಕಲ ವೇದಾರ್ಥಸಾರಭೂತನಾದ ಪರಬ್ರಹ್ಮನಾದ ಶ್ರೀಮನ್ನಾರಾಯಣನ ಸ್ವರೂಪವನ್ನು ನಿರ್ಣಯಾತ್ಮಕವಾಗಿ ವಿವರಿಸಹೊರಟ ಸೂತ್ರಗಳೇ 'ಬ್ರಹ್ಮಸೂತ್ರಗಳು'.[2]

---

1. ಲಘೂನಿ ಸೂಚಿತಾರ್ಥಾನಿ ಸ್ವಲ್ಪಾಕ್ಷರಪದಾನಿ ಚ ।
ಸರ್ವತಃ ಸಾರಭೂತಾನಿ ಸೂತ್ರಾಣ್ಯಾಹುರ್ಮನೀಷಿಣಃ ॥

2. ಬ್ರಹ್ಮ ವೇದಃ ತದರ್ಥಃ ಪರಬ್ರಹ್ಮ ವಾ । ತಸ್ಯ ಸೂತ್ರಾಣಿ ಬ್ರಹ್ಮಸೂತ್ರಾಣಿ ।
ಸಕಲವೇದಾರ್ಥಭೂತಸ್ಯ ಪರಬ್ರಹ್ಮಣೋ ವಿಷ್ಣೋಃ ಸ್ವರೂಪನಿರ್ಣಾಯಕಾನಿ
ಸೂತ್ರಾಣೀತಿ ಯಾವತ್ । (ನ್ಯಾ.ಸು. 1-1-1)

ಎಲ್ಲ ವಿದ್ಯೆಗಳಲ್ಲಿಯೂ ಬ್ರಹ್ಮವಿದ್ಯೆಯು ಅತ್ಯಂತ ಮುಖ್ಯವಾದುದು. ಆದುವೇ ಎಲ್ಲವಿದ್ಯಾಮೂಲಭೂತವಾದುದು.[1] ಅಂತಹ ಪರಬ್ರಹ್ಮಜ್ಞಾನವನ್ನು ಅಸಂದಿಗ್ಧವಾಗಿ ಮಾಡಿಕೊಡಲು ಪ್ರವೃತ್ತವಾದ ಈ ಬ್ರಹ್ಮಮೀಮಾಂಸಾಶಾಸ್ತ್ರವು ಎಲ್ಲ ಶಾಸ್ತ್ರಗಳಿಗಿಂತಲೂ ಅತ್ಯಂತ ಉತ್ತಮವಾದುದು. ಆದುದರಿಂದಲೇ ಈ ಶಾಸ್ತ್ರವು 'ಪರವಿದ್ಯೆ'ಯೆಂದು ಪರಿಗಣಿಸಲ್ಪಟ್ಟಿರುವದು. ಬ್ರಹ್ಮವೈವರ್ತ ಪುರಾಣವು ಬ್ರಹ್ಮಸೂತ್ರಗಳ ಮಹತಿಯನ್ನು ವಿವರಿಸುತ್ತ, "ಬ್ರಹ್ಮಸೂತ್ರಗಳಿಗನುಗುಣವಾಗಿ ವೇದಾದಿ ಸಕಲ ಶಾಸ್ತ್ರವನ್ನು ಅರ್ಥಮಾಡಿಕೊಳ್ಳಬೇಕು"[2] ಎಂದು ಸ್ಪಷ್ಟಪಡಿಸಿರುವರು. ಶ್ರುತಿ ಹಾಗೂ ಶ್ರುತ್ಯನುಸಾರಿಯಾದ ಸ್ಮೃತಿಗಳಲ್ಲಿಯ ನಿಶ್ಚಿತ ತಾತ್ತ್ವಿಕಜ್ಞಾನವು ಈ ಶಾಸ್ತ್ರದಿಂದ ಮಾತ್ರ ಸಾಧ್ಯ.[3] ಆದುದರಿಂದಲೇ ಇದಕ್ಕೆ ಸರಿಮಿಗಿಲಾದ ಪ್ರಮಾಣಭೂತವಾದ ಶಾಸ್ತ್ರ ಮತ್ತೊಂದಿಲ್ಲವೆಂದು[4] ಶ್ರೀಮದಾಚಾರ್ಯರು ಉದ್ಘೋಷಿಸಿದ್ದಾರೆ. ಮಹಾಭಾರತದ ಭಾವವೂ ಸಹ "ಸರ್ವೋತ್ತಮನಾದ ದೇವತೆ ಬೇರೆ ಯಾರೂ ಇಲ್ಲ"[5] ಎಂಬುದೇ ಆಗಿರುವುದು. ಮಹಾಭಾರತಪಾರಿಜಾತಮಧುಭೂತವಾಗಿ ಸರ್ವಭಾರತಾರ್ಥ ಸಂಗ್ರಹವಂತಿರುವ ಶ್ರೀಮದ್ಭಗವದ್ಗೀತೆಯೂ ಸಹ "ನಿಶ್ಚಿತ ತತ್ತ್ವಜ್ಞಾನವನ್ನು ಹೊಂದುವದು ಬ್ರಹ್ಮಸೂತ್ರಗಳಿಂದಲೇ" ಎಂಬು ದನ್ನು ಸ್ಪಷ್ಟಪಡಿಸಿರುವದು.[6]

## II

ವೇದಾಂತರಹಸ್ಯಮಯ ಸಿದ್ಧಾಂತಪ್ರತಿಪಾದಕವಾದ ಸರ್ವೋತ್ತಮಶಾಸ್ತ್ರವೆಂದು ಶಾಸ್ತ್ರಸಾರಜ್ಞರಿಂದ ಜೇಗೀಯ-ಮಾನವಾದ ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನು ನಿರ್ಮಾಣ ಮಾಡಿ ಜಗತ್ತಿಗೆ ದಯಪಾಲಿಸಿದವರು - ಕೃಷ್ಣದ್ವೈಪಾಯನ ಅಥವಾ ವೇದವ್ಯಾಸ ಮಹರ್ಷಿಗಳೆಂದು ಪ್ರಸಿದ್ಧಿಯನ್ನು ಹೊಂದಿದ ಭಗವಾನ್ ಬಾದರಾಯಣರು. ನಾರಾಯಣನಿಂದ ಉಪದಿಷ್ಟವಾದ ತತ್ತ್ವಜ್ಞಾನವು, ದ್ವಾಪರಾಂತ್ಯದಲ್ಲಿ ಗೌತಮಶಾಪದಿಂದ ತಿರೋಹಿತವಾದಾಗ, ಸಜ್ಜನಾನುಗ್ರಹಾಕಾಂಕ್ಷಿಗಳಾದ ಬ್ರಹ್ಮ-ರುದ್ರಾದಿದೇವತೆಗಳಿಂದ ಸಂಪ್ರಾರ್ಥಿತನಾದ, ಶ್ರೀಮನ್ನಾರಾಯಣನು ವ್ಯಾಸರೂಪದಿಂದ ಧರೆಗಿಳಿದು ಜ್ಞಾನ-ಸಂಸ್ಥಾಪನೆಗೈದನೆಂದು ಪ್ರಮಾಣವಚನಗಳು ಸಾರುತ್ತಿವೆ.[7] ವೇದವಿಭಾಜಕರು, ಅಷ್ಟಾದಶಪುರಾಣನಿರ್ಮಾತೃಗಳೂ[8] ಆದ

---

1. ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮ್ । (ಮುಂ. 1-17)
2. ಬ್ರಹ್ಮಸೂತ್ರಾನುಸಾರೇಣ ವೇದಾದ್ಯಂ ಸರ್ವಮೇವ ತು ।
   ಯೋಜ್ಯಂ ನ ಬ್ರಹ್ಮಸೂತ್ರಾಣಿ ದೃಶ್ಯಮಾನಾರ್ಥತೋಽನ್ಯಥಾ ॥
3. ನಿರ್ಣೀಯತೇ ಯತಸ್ಸಮ್ಯಗಿದಂ ಸತ್ಯಮಿತಿ ಸ್ಫುಟಮ್ ।
   ಶ್ರುತಿಸ್ಮೃತ್ಯುದಿತಂ ಸರ್ವಂ ವ್ಯಕ್ತಂ ಮೀಮಾಂಸಯೈತಯಾ ॥
4. ........................ ಚಕ್ರೇ ಶಾಸ್ತ್ರಮನುತ್ತಮಮ್ ।
   ಅತೋ ನೈತಾದೃಶಂ ಕಿಂಚಿತ್ಪ್ರಮಾಣತಮಮಿಷ್ಯತೇ ॥ (ಅನು. 1-1-1)
5. ಸತ್ಯಂ ಸತ್ಯಂ ಪುನಃ ಸತ್ಯಮುದ್ಧೃತ್ಯ ಭುಜಮುಚ್ಯತೇ ।
   ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಮ್ ॥
6. ಭ.ಗೀ. 15-5.
7. ಬ್ರಹ್ಮಸೂತ್ರಭಾಷ್ಯ 1-1-1. ಹೆಚ್ಚಿನ ವಿವರಗಳಿಗಾಗಿ ನೋಡಿ : -
   ತತ್ತ್ವಪ್ರದೀಪ 1-1-1, ತತ್ತ್ವಪ್ರಕಾಶಿಕಾ ಭಾವದೀಪ 1-1-1.
8. ವ್ಯಾಸನಾಮಾತ್ಮಕೋ ವಿಷ್ಣುಃ ಪುರಾಣಾನಾಂ ಪ್ರವರ್ತಕಃ ।
   ವೇದಾಂತನಿಶ್ಚಯಂ ಬ್ರಹ್ಮಸೂತ್ರಂ ಹರಿಗುಣಾತ್ಮಕಮ್ ॥

ಶ್ರೀ ವ್ಯಾಸರೇ ಭಗವದ್ಗುಣವರ್ಣನಪರಗಳಾದ ಈ ಬ್ರಹ್ಮಸೂತ್ರಗಳನ್ನು ರಚಿಸಿದವರೆಂದು ಸ್ಕಂದಪುರಾಣ ಮತ್ಸ್ಯಪುರಾಣ ಹಾಗೂ ವಾಯುಪುರಾಣದ[1] ವಚನಗಳು ಸ್ಪಷ್ಟಪಡಿಸುತ್ತವೆ. ಬಹುಶಃ ಎಲ್ಲ ಭಾಷ್ಯಕಾರರಿಗೂ ಈ ವಿಷಯದಲ್ಲಿ ಐಕಮತ್ಯವಿರುವದು. ಆದರೆ ಶಂಕರಾಚಾರ್ಯರು ಮಾತ್ರ ವ್ಯಾಸರ ಹೆಸರನ್ನು ಉಲ್ಲೇಖಿಸಿದ ಸಂದರ್ಭದಲ್ಲಿ ಅವರು ಸೂತ್ರಕಾರರೆಂಬುದನ್ನು ಸ್ಪಷ್ಟಪಡಿಸಿಲ್ಲವಾದ್ದರಿಂದ ಕೆಲವು ಸಂಶೋಧಕರು ಶಂಕರಾಚಾರ್ಯರ ದೃಷ್ಟಿಯಲ್ಲಿ ಸೂತ್ರಕಾರರಾದ ಬಾದರಾಯಣರು ಹಾಗೂ ವ್ಯಾಸರು ಭಿನ್ನ ವ್ಯಕ್ತಿಗಳು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಆದರೆ ಶಂಕರಾಚಾರ್ಯರು ಈ ವಿಷಯದಲ್ಲಿ ಸ್ಪಷ್ಟವಾಗಿ ಹೇಳದಿದ್ದರೂ ಸಹ ಶಾಂಕರಭಾಷ್ಯವ್ಯಾಖ್ಯಾನಕಾರರಾದ ಭಾಮತೀಕಾರರು[2] ರತ್ನಪ್ರಭಾ[3]ವ್ಯಾಖ್ಯಾಕಾರರು ಮೊದಲಾದವರು ವ್ಯಾಸರೇ ಸೂತ್ರಕಾರರೆಂಬುದನ್ನು ಸ್ಪಷ್ಟಪಡಿಸಿರುವದರಿಂದ ಈ ವಿಷಯದಲ್ಲಿ ಹೆಚ್ಚಿನ ವಿವಾದವಿರುವದಿಲ್ಲ. "ಸರ್ವೇ ವೇದಾ ಯತ್ಪದಮಾಮನಂತಿ", "ವೇದೈಶ್ಚ ಸರ್ವೈರಹಮೇವ ವೇದ್ಯಃ" ಇತ್ಯಾದಿ ಶ್ರುತಿಸ್ಮೃತಿಗಳಲ್ಲಿ ಉದ್ಘೋಷಿಸಲ್ಪಟ್ಟ ಪರಮಾತ್ಮನಾದ ಶ್ರೀಮನ್ನಾರಾಯಣನ ಸರ್ವೋತ್ತಮತ್ವ ಆತನಿಂದ ಸೃಷ್ಟವಾದ ಜಗತ್ತಿನ ಸತ್ಯತ್ವ ಹಾಗೂ ಪಂಚಭೇದಗಳ ನಿತ್ಯತ್ವವನ್ನು ಶ್ರೀಬಾದರಾಯಣರು ತಮ್ಮ ಬ್ರಹ್ಮಮೀಮಾಂಸಾಶಾಸ್ತ್ರದಿಂದ ಸ್ವೀಕರಿಸಿರುವರು.

## III

ವಿಭಿನ್ನಾಂತಃಕರಣ ಹಾಗೂ ಅವರವರ ಪ್ರವೃತ್ತಿಯೋಗ್ಯತೆಗಳಿಗನುಗುಣವಾಗಿ ಕಾಲಕ್ರಮದಲ್ಲಿ ಈ ಬ್ರಹ್ಮಸೂತ್ರಗಳ ಸ್ವಾರ್ಥವನ್ನು ವಿವರಿಸಲು ಅನೇಕ ವ್ಯಾಖ್ಯಾನಗಳು ಹೊರಟವು. ಶ್ರೀಮದಾಚಾರ್ಯರ ಭಾಷ್ಯಕ್ಕಿಂತಲೂ ಪೂರ್ವದಲ್ಲಿ ಸುಮಾರು ಇಪ್ಪತ್ತೊಂದು ಭಾಷ್ಯಗಳಿದ್ದವೆಂದು ತಿಳಿದುಬರುವದು. ಖಂಡನ-ಮಂಡನ ಪ್ರಸಂಗಗಳಲ್ಲಿ ಅಲ್ಲಲ್ಲಿ ಈ ಭಾಷ್ಯಕಾರರ ಹೆಸರುಗಳು ಕೇಳಿಬರುತ್ತಿದ್ದರೂ ಸಹ ಸಾಕಷ್ಟು ಅನುಯಾಯಿಗಳಿಂದ ಸುಭದ್ರವಾಗಿ ರಕ್ಷಿಸಿಕೊಂಡು ಬಂದಿರುವ ಶಂಕರ, ರಾಮಾನುಜ ಹಾಗೂ ಪೂರ್ಣಪ್ರಜ್ಞರ ಭಾಷ್ಯಗಳು ಮಾತ್ರ ಈಗ ಹೆಚ್ಚಿನ ಪ್ರಸಿದ್ಧಿಯಲ್ಲಿರುವವು. ಸ್ಥೂಲವಾಗಿ ಹೇಳಬೇಕಾದರೆ ಉಳಿದೆಲ್ಲ ಭಾಷ್ಯ-ವ್ಯಾಖ್ಯಾನಗಳು ಒಂದಿಲ್ಲೊಂದು ದೃಷ್ಟಿಯಿಂದ ಈ ಮೂರರಲ್ಲಿಯೇ ಅಂತರ್ಭಾವ ಹೊಂದುವವೆಂದರೆ ತಪ್ಪಾಗದು. ಬ್ರಹ್ಮಸೂತ್ರಗಳ ಆಧಾರದಿಂದ ಈ ಮೂವರು ಭಾಷ್ಯಕಾರರು ಭಿನ್ನ ಭಿನ್ನ ತತ್ವಗಳನ್ನೊಳಗೊಂಡ ತಮಗೆ ಅಭಿಮತವಾದ ಮತಗಳನ್ನು ಸ್ಥಾಪಿಸಿದರು. ಅವು ಈಗ ಅದ್ವೈತ-ವಿಶಿಷ್ಟಾದ್ವೈತ-ದ್ವೈತಗಳೆಂದು ಪ್ರಸಿದ್ಧಿಯಲ್ಲಿರುವವು.

"ಬ್ರಹ್ಮವೊಂದೇ ಪಾರಮಾರ್ಥಿಕ ಸತ್ಯವು. ಬ್ರಹ್ಮವ್ಯತಿರಿಕ್ತವಾದ ಸಮಸ್ತವೂ ಮಾಯಾಮಯವಾದ್ದರಿಂದ ಮಿಥ್ಯಾ-(ಸುಳ್ಳು)ಭೂತವಾಗಿರುವದು. ಬ್ರಹ್ಮನೇ ಉಪಾಧಿಗಳಲ್ಲಿ ಪ್ರತಿಬಿಂಬಿಸುವನಾದ್ದರಿಂದ ಜೀವೇಶಭಾವವನ್ನು ಹೊಂದಿರುತ್ತಾನೆ. ಈ ಸಂಸಾರವೆಲ್ಲವೂ ಜೀವನ ಭ್ರಾಂತಿ. ಭ್ರಾಂತಿನಿವೃತ್ತಿಯೇ ಜೀವನಿಗೆ ಮುಕ್ತಿಯು. ಜೀವ-ಬ್ರಹ್ಮರುಗಳ ಐಕ್ಯವನ್ನು ಬೋಧಿ-

---

1. ಉತ್ಪನ್ನಾನ್ನಗವಾನ್ವೇದಾನುಜ್ಜಹಾರ ಹರಿಃ ಸ್ವಯಮ್ ।
ಚಕಾರ ಬ್ರಹ್ಮಸೂತ್ರಾಣಿ ಯೇಷಾಂ ಸೂತ್ರತ್ವಮಂಜಸಾ ॥ (ಸ್ಕಂದಪುರಾಣ)
ಅಸ್ಮತ್ಸಮ್ಯಕ್ತ ವಿವಾರ್ಥೋಽ ಭವತಾ ಸಂಪ್ರದರ್ಶಿತಃ ।
ಪುರಾಣೇಷ್ವೇತಿಹಾಸೇಷು ಸೂತ್ರೇಷ್ವಪಿ ಚ ನೈಕಧಾ । (ವಾಯುಪುರಾಣ)
ಅಂಗಾನಿ ಚತುರೋ ವೇದಾನ್ ಪುರಾಣಂ ನ್ಯಾಯವಿಸ್ತರಮ್ ।
ಮಿಮಾಂಸಾನ್ಯಾಯಶಾಸ್ತ್ರಂ ಚ ಪರಿಗೃಹ್ಯ ಮಯಾ ಕೃತಮ್ ॥ (ಮತ್ಸ್ಯಪುರಾಣ)
2. ಬ್ರಹ್ಮಸೂತ್ರಕೃತೇ ತಸ್ಮೈ ವೇದವ್ಯಾಸಾಯ ಧೀಮತೇ ॥ ಭಾಮತೀ ಮಂಗಲಾಚರಣ (5) ॥
3. ರತ್ನಪ್ರಭಾ 1-1-1.

ಸುವ ವೇದಾಂತವಾಕ್ಯಶ್ರವಣದಿಂದ ಈ ಭ್ರಮವು ನಿವೃತ್ತವಾಗುವದು"[1] ಎಂಬುದು ಶಂಕರಾಚಾರ್ಯರು ಬೋಧಿಸಿದ ಅದ್ವೈತಮತದ ಸಾರವಾಗಿರುವದು. ಒಂದೇ ಮಾತಿನಲ್ಲಿ ಹೇಳಬೇಕಾದರೆ "ಬ್ರಹ್ಮವು ಸತ್ಯ, ಜಗತ್ತು ಮಿಥ್ಯಾ, ಜೀವನು ಬ್ರಹ್ಮಸ್ವರೂಪ"[2] ಎಂಬುದು ಅದ್ವೈತಮತದ ಮೂಲ ಸಿದ್ಧಾಂತವಾಗಿರುವದು.

"ಪ್ರಪಂಚವು ಸತ್ಯವಾದದ್ದು ಲಕ್ಷ್ಮೀಪತಿಯು ಈ ಪ್ರಪಂಚದ ಅಧಿಪತಿ. ಅವನೇ ಪರಬ್ರಹ್ಮನು. ಎಲ್ಲ ಚರಾಚರ ವಸ್ತುಗಳು ಆ ಪರಬ್ರಹ್ಮನ ಶರೀರವಾಗಿ ಧರಿಸಲ್ಪಟ್ಟಿರುವವು. ಚೇತನಗಳು ಪರಮಾತ್ಮನಿಗಿಂತ ಭಿನ್ನವಾಗಿರುವವು. ಪರಮಾತ್ಮನ ನಿಯಮಗಳನ್ನು ಉಲ್ಲಂಘನೆ ಮಾಡಿದ ಜೀವರುಗಳಿಗೆ ಶಿಕ್ಷಾರೂಪವಾಗಿ ಜನನ-ಮರಣ ರೂಪವಾದ ಈ ಸಂಸಾರಪ್ರಾಪ್ತಿಯಾಗುವದು. ಈ ಸಂಸಾರವು ಸತ್ಯವಾಗಿರುವದು. ಭಕ್ತಿಯೇ ಮುಂತಾದ ಉಪಾಯಗಳಿಂದ ವೈಕುಂಠಸ್ಥಾನದಲ್ಲಿ ಪರಬ್ರಹ್ಮಾನುಭವವನ್ನು ಹೊಂದುವದೇ ಪರಮಾತ್ಮಪ್ರಾಪ್ತಿರೂಪ ಮುಕ್ತಿ"[3] ಎಂದು ವಿಶಿಷ್ಟಾದ್ವೈತ ಮತದ ಸಾರವಾಗಿರುವದು.

"ಪರಿದೃಶ್ಯಮಾನವಾದ (ಕಣ್ಣಿಗೆ ಕಾಣುವ) ಈ ಜಗತ್ತು ಸತ್ಯವಾದುದು. ಜಗತ್ತಿಗೆ ಜನ್ಮ-ಸ್ಥಿತಿ-ಸಂಹಾರ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳನ್ನು ಕರುಣಿಸುವ ಕರುಣಾಸಮುದ್ರನಾದ ಅನಂತಕಲ್ಯಾಣಗುಣಪರಿಪೂರ್ಣನಾದ ಶ್ರೀಹರಿಯು ಸರ್ವೋತ್ತಮನಾಗಿರುವನು. ಆತನಿಗೆ ಸರಿ-ಮಿಗಿಲಾದವರಾರೂ ಇಲ್ಲ, ಜೀವರಾಶಿಗಳೆಲ್ಲರೂ ಆತನಿಂದ ಭಿನ್ನವಾಗಿದ್ದು ಆತನ ದಾಸರಾಗಿರುವರು. ಜೀವಗುಣ ನೀಚೋಚ್ಚಭಾವದಿಂದ ಕೂಡಿರುವದು. ಜೀವನ ನಿಜವಾದ ಸ್ವರೂಪಾನಂದಾನುಭವವೇ ಮುಕ್ತಿಯು, ನಿರ್ಮಲವಾದ ಭಕ್ತಿಗೊಲಿದ ಪರಮಾತ್ಮನ ಪ್ರಸಾದದಿಂದ ಈ ಮುಕ್ತಿಯು ಜೀವನಿಗೆ ಲಭಿಸುವದು. ಸರ್ವವೇದಗಳಿಂದಲೂ ಶ್ರೀಹರಿಯೇ ವೇದ್ಯನಾಗಿರುವನು"[4] ಎಂಬುದು ಶ್ರೀಮದಾಚಾರ್ಯರು ಬೋಧಿಸಿದ ತತ್ತ್ವಸಾರವಾಗಿರುವದು.

---

1. ಬ್ರಹ್ಮೈಕಂ ಪರಮಾರ್ಥಸತ್ತದಿತರನ್ಮಾಯಾಮಯತ್ವಾನ್ಮೃಷಾ
   ಬ್ರಹ್ಮೇವೇಕಮುಪಾಧಿಜಂಭಿತಮತೋ ಜೀವೇಶಭಾವಂ ಗತಮ್ ।
   ಭ್ರಾಂತಿಃ ಸಂಸೃತಿರಸ್ಯ ತತ್ಪ್ರಶಮನಂ ಮುಕ್ತಿಸ್ತದಪ್ಯಾತ್ಮನೋ
   ಬ್ರಹ್ಮೈಕ್ಯಾವಗಮಾತ್ ಶೃತಿಶ್ರವಣಜಾದಿತ್ಯಾಹುರದ್ವೈತಿನಃ ॥
2. ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।
   ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ ॥
3. ಅಸ್ತಾಂ ಕ್ಷುದ್ರಪದಾರ್ಥದೂಷಣಮಿದಂ ಯತ್ಸಮ್ಮತಂ ತನ್ಮತ-
   ಪ್ರೌಢಾನಾಮಪಿ ತೇ ಯಥಾರುಚಿ ಯತೋ ಜಲ್ಪಂತಿ ನಾನಾವಿಧಮ್ ।
   ಯುಕ್ತ್ಯೋ ವಸ್ತುನಿ ನೋ ವಿಕಲ್ಪ ಇತಿ ತೇ ಸುಂದೋಪಸುಂದಾದಿವತ್
   ಸರ್ವೇಽನ್ಯೋನ್ಯವಿರೋಧತಃ ಪ್ರತಿಹತಾ ......... ॥ (ಅದ್ವೈತಕಾಲಾನಲಃ 1-20)
   ಶ್ರೀಮಲ್ಲಕ್ಷ್ಮಣಯೋಗಿನಸ್ತು ಭುವನಂ ಸತ್ಯಂ ತದೀಶಃ ಶ್ರಿಯಃ
   ಕಾಂತೋ ಬ್ರಹ್ಮ ಸ ಏವ ಸೋಽಖಿಲತನುಃ ಭಿನ್ನಾಸ್ತತಶ್ಚೇತನಾಃ ।
   ಸತ್ಯಾಸಂಸೃತಿರೀಶ ನಿಗ್ರಹಕೃತಾ ಮುಕ್ತಿಸ್ತು ಭಕ್ತ್ಯಾದಿನಾ
   ತತ್ಪ್ರಾಪ್ತಿಃ ಪರಮೇ ಪದೇ ತದನುಭೂತ್ಯೈ ಹಿ ಸಂಚಕ್ಷತೇ ॥
4. ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ
   ಭಿನ್ನಾ ಜೀವಗಣಾ ಹರೇರನುಚರಾ, ನೀಚೋಚ್ಚಭಾವಂಗತಾಃ ।
   ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
   ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

ಪರಸ್ಪರ ವಿರುದ್ಧವಾದ ಪ್ರಮೇಯಗಳನ್ನು ಪ್ರತಿಪಾದಿಸುವ ಈ ಸಿದ್ಧಾಂತಗಳೆಲ್ಲವೂ ಸರಿಯೆಂದು ಹೇಳಲಾಗುವದಿಲ್ಲ, ಈ ಸಿದ್ಧಾಂತಗಳಲ್ಲಿ ಯಾವದಾದರೊಂದು ಸಿದ್ಧಾಂತವು ಯಥಾರ್ಥವಾಗಿರುವದೆಂಬುದರಲ್ಲಿ ಯಾವ ಸಂಶಯವೂ ಇಲ್ಲ, ಆದರೆ ಅದನ್ನು ಕಂಡುಕೊಳ್ಳಬೇಕಾದರೆ ಆಚಾರ್ಯತ್ರಯರ ವ್ಯಾಖ್ಯಾನಗಳನ್ನು ತುಲನಾತ್ಮಕವಾಗಿ ಅಭ್ಯಸಿಸಿದಾಗ ಯಾವದು ಯಥಾರ್ಥವಾದುದೆಂಬುದು ನಮಗೆ ಸ್ಪಷ್ಟವಾಗುವದು.

ಸಾಮಾನ್ಯವಾಗಿ ಶಂಕರಾಚಾರ್ಯರ ಭಾಷ್ಯ - ಅದರ ವ್ಯಾಖ್ಯಾನಗಳನ್ನು ಅವಲೋಕಿಸಿದಾಗ ಅದ್ವೈತ ಮತದ ಮೂಲಭೂತ ಅಥವಾ ಮತಕ್ಕೆ ಆಧಾರಸ್ತಂಭದಂತಿರುವ ಮುಖ್ಯ ಪ್ರಮೇಯಗಳಲ್ಲಿಯೇ ಶಾಂಕರಭಾಷ್ಯಕ್ಕೆ ಅದರ ವ್ಯಾಖ್ಯಾನಗಳಿಗೂ ಭಿನ್ನಾಭಿಪ್ರಾಯವಿರುವದನ್ನು ಗಮನಿಸಬಹುದು. ಅವಿದ್ಯಾ, ಅವಿದ್ಯಾನಿವೃತ್ತಿ, ಅನಿರ್ವಚನೀಯ ಇವೇ ಮುಂತಾದ ಮೂಲಭೂತ ಸಿದ್ಧಾಂತಗಳಲ್ಲಿ ಶಾಂಕರಭಾಷ್ಯ, ಅದರ ವ್ಯಾಖ್ಯಾನಗಳಾದ ಭಾಮತೀ ಹಾಗೂ ವಿವರಣಗಳು ಒಂದಕ್ಕೊಂದು ಭಿನ್ನವಾದ ಅಭಿಪ್ರಾಯವನ್ನು ಹೊಂದಿವೆಯೆಂಬುದು ಅದ್ವೈತಸಿದ್ಧಾಂತವ್ಯಾಖ್ಯಾನಕಾರರಲ್ಲಿ ಕೆಲವರು ಒಪ್ಪಿಕೊಂಡ ಮಾತಾಗಿರುವುದು. ಉದಾ :-

| ಶಾಂಕರಭಾಷ್ಯ | ವಿವರಣ | ಭಾಮತೀ |
|---|---|---|
| **ಅವಿದ್ಯಾ :** ಆತ್ಮ-ಅನಾತ್ಮಗಳೆಂಬ ಸತ್ಯ-ಅನೃತಗಳ ವಿವೇಕವಿಲ್ಲದೆ ಒಂದನ್ನೊಂದು ತಿಳಿಯುವ ಅಧ್ಯಾಸವೇ ಅವಿದ್ಯೆ. ಈ ಅವಿದ್ಯೆಯು ಪ್ರಮಾಣ-ಪ್ರಮೇಯಾದಿ ವ್ಯವಹಾರಕ್ಕೆ ಕಾರಣವಾಗಿದೆ. ಅವಿದ್ಯೆಯೆಂಬುದು ತಪ್ಪು ತಿಳುವಳಿಕೆ. | ಅಧ್ಯಾಸಕ್ಕೆ ಉಪಾದಾನಕಾರಣವಾಗಿರುವ ಅನಿರ್ವಚನೀಯವಾದ ಜ್ಞಾನವಿರೋಧಿಯಾದ ಜಡಾತ್ಮಕ ಶಕ್ತಿಯೇ ಅವಿದ್ಯೆ. ಇದು ಆತ್ಮನಿಗೆ ಆವರಣವು. ಅಂತಃಕರಣವು ಇದರ ಪರಿಣಾಮವಾಗಿರುವದು. | ಅವಿದ್ಯಾಶಕ್ತಿಯು ಬ್ರಹ್ಮ ಅಥವಾ ಜೀವರುಗಳಿಗಿಂತ ಬೇರೆಯೆಂದಾಗಲೀ ಬೇರೆಯಲ್ಲವೆಂದಾಗಲೀ ಗೊತ್ತುಪಡಿಸಲಾಗುವದಿಲ್ಲ, ಇದು ಪ್ರತಿ ಜೀವರಿಗೂ ಬೇರೆ ಬೇರೆಯಾಗಿ ಜ್ಞಾನನಾಶ್ಯವಾಗಿದೆ. ಬ್ರಹ್ಮವು ಅವಿದ್ಯೆಗೆ ಆಶ್ರಯವಲ್ಲ, ವಿಷಯವಾಗಿದೆ. ಅವಿದ್ಯಾ ಜೀವರುಗಳು ಬೀಜಾಂಕುರ-ನ್ಯಾಯದಿಂದ ಅನಾದಿ. |

ಶಾಸ್ತ್ರಾರ್ಥದ ಸರಿಯಾದ ಜ್ಞಾನವಾಗದಿರುವದೇ ಈ ರೀತಿಯಾದ ತಪ್ಪುತಿಳಿವಳಿಕೆಗೆ ಕಾರಣವಾಗಿರುವದು. ಪ್ರಮಾಣದ ಆಧಾರದಿಂದ ವಿಷಯಗಳನ್ನು ಸಾಧಿಸದೆ ಮನಬಂದಂತೆ ವಿಷಯರಚನೆಮಾಡಿ ಅದಕ್ಕೆ ಪ್ರಮಾಣಗಳನ್ನು ಹುಡುಕುತ್ತ ಹೊರಟಿರುವದು ಇಂತಹ ಪರಸ್ಪರ ಭಿನ್ನಾಭಿಪ್ರಾಯಕ್ಕೆ ಇನ್ನೊಂದು ಕಾರಣವೆಂದು ಹೇಳಬಹುದು. ಬಾದರಾಯಣರ ಬ್ರಹ್ಮಸೂತ್ರಗಳು ಪ್ರತಿಯೊಂದು ಹಂತದಲ್ಲಿಯೂ ಜೀವ-ಬ್ರಹ್ಮರಿಗೆ ಭೇದವನ್ನೇ ಬೋಧಿಸಹೊರಟಿವೆ ಎಂಬುದು ಸೂತ್ರವನ್ನು ಸರಿಯಾಗಿ ಅಭ್ಯಸಿಸಿದವರಿಗೆ ಸ್ಪಷ್ಟವಾಗಿ ಗೋತ್ತಾಗುವದು. ಅದ್ವೈತವನ್ನು ಸಾಧಿಸಹೊರಟ ಶಂಕರಾಚಾರ್ಯರಿಗೂ ಈ ವಿಷಯ ಹೊಸದೇನಲ್ಲ, ವ್ಯಾಸಸೂತ್ರಗಳಲ್ಲಿ ಪ್ರತಿಪಾದಿತವಾಗದಿರುವ ಅದ್ವೈತವನ್ನು ಬಹು ಪರಿಶ್ರಮವಹಿಸಿ ಸಾಧಿಸಲು ಪ್ರಯತ್ನಿಸಿದರೂ ಶಂಕರಾಚಾರ್ಯರು ಈ ದಿಶೆಯಲ್ಲಿ ಸಫಲವಾಗದೇ ಒಂದೆರಡು ಸೂತ್ರಗಳನ್ನು ಹೊರತುಪಡಿಸಿ ಸಮಗ್ರ ಸೂತ್ರರಾಶಿಯೇ ಭೇದಪರವಾಗಿದೆಯೆಂದು ಒಪ್ಪಿಕೊಳ್ಳಬೇಕಾಯಿತು. ಶಾಂಕರಭಾಷ್ಯವ್ಯಾಖ್ಯಾನಕಾರರಾದ ಆನಂದಗಿರಿ, ಭಾಮತೀ, ರತ್ನಪ್ರಭಾ ಮುಂತಾದವರು ತಮ್ಮ ವ್ಯಾಖ್ಯಾನಗಳಲ್ಲಿ ಈ ಅಂಶವನ್ನು ಸ್ಪಷ್ಟಪಡಿಸಿರುವರು. ಶಾಂಕರಭಾಷ್ಯದ ಭಾವಗಾಂಭೀರ್ಯವರ್ಣನಪರವಾಗಿ ಹೊರಟ ವ್ಯಾಖ್ಯಾನವೊಂದು,

ಶಾಸ್ತ್ರಾಣಾಂ ಭೇದ ಏವ ಶ್ರುತಿಶಿಖರಗಿರಾಮಾಗಮಾನಾಂ ಚ ನಿಷ್ಠಾ
ಸಾಕಂ ಸರ್ವೈಃ ಪ್ರಮಾಣೈಃ ಸ್ಮೃತಿನಿಕರಮಹಾಭಾರತಾದಿಪ್ರಬಂಧೈಃ ।

ತತ್ರೈವ ವ್ಯಾಸಸೂತ್ರಾಣ್ಯಕುಟಿಲವಿಧಯಾ ಭ್ರಾಂತಿತಾತ್ಪರ್ಯವಂತಿ
ಪ್ರತ್ಯೈರಾಚಾರ್ಯರತ್ನೈರಪಿ ಪರಿಜಗೃಹೇ ಶಂಕರಾರ್ಯೈಃ ಸ ಚಾಪಿ ॥

"ಸಮಗ್ರವಾದ ವೇದರಾಶಿ, ವೇದಶಿರೋಭೂತಗಳಾದ ಉಪನಿಷತ್ತುಗಳು, ಮಹಾಭಾರತ ಮುಂತಾದ ಪ್ರಬಂಧದ ಮಕುಟಗಳು, ಸ್ಮೃತಿಗಳು, ಪ್ರತ್ಯಕ್ಷಾದಿ ಸಮಸ್ತ ಪ್ರಮಾಣಗಳು, ಹೀಗೆ ಸಮಗ್ರ ಶಾಸ್ತ್ರಕ್ಕೆ ಭೇದಪ್ರತಿಪಾದನೆಯೇ ತಾತ್ಪರ್ಯ-ವಿರುವದು. ವೇದವ್ಯಾಸರ ಬ್ರಹ್ಮಸೂತ್ರಗಳೂ ಸಹ ಸರಳವಾದ ಸ್ಪಷ್ಟವಾದ ರೀತಿಯಲ್ಲಿ ಭೇದವನ್ನು ಪ್ರತಿಪಾದಿಸುವವು. ಸೂತ್ರಭಾಷ್ಯಕಾರರಾದ ಆಚಾರ್ಯರತ್ನರಾದ ಶಂಕರಾಚಾರ್ಯ ಮುಂತಾದ ಆಚಾರ್ಯವರ್ಯರೂ ಸಹ ಇದೇ ವಿಷಯ ವನ್ನು ಅಂಗೀಕರಿಸಿರುವರು" ಎಂದು ಸ್ಪಷ್ಟವಾಗಿ ಎಲ್ಲ ಶಾಸ್ತ್ರಗಳಿಗೂ ಜೀವ-ಬ್ರಹ್ಮರ ಭೇದವಾದದಲ್ಲಿ ತಾತ್ಪರ್ಯವಿದೆ-ಯೆಂಬುದನ್ನು ಸ್ಪಷ್ಟಪಡಿಸಿರುವದು. ಆದುದರಿಂದಲೇ ಪ್ರಸಿದ್ಧ ಇತಿಹಾಸಕಾರರಾದ ವಿದ್ಯಾರಣ್ಯರ ಶಂಕರದಿಗ್ವಿಜಯ ಮತ್ತು ಅದರ ವ್ಯಾಖ್ಯಾನಗಳಲ್ಲಿ,

ವ್ಯಾಸೋಪದಿಷ್ಟಸೂತ್ರಾಣಾಂ ದ್ವೈತವಾಕ್ಯಾತ್ಮನಾಂ ಶಿವೈ ।
ಅದ್ವೈತಮೇವ ಸೂತ್ರಾರ್ಥಂ ಪ್ರಾಮಾಣ್ಯೇನ ಕರಿಷ್ಯತಿ ।
ಅವಿಮುಕ್ತೇ ಸಮಾಸೀನಂ ವ್ಯಾಸಂ ವಾಕ್ಯೈರ್ವಿಜಿಗ್ಯ ಚ ॥

"ಜೀವೇಶಭೇಧವನ್ನು ಪ್ರತಿಪಾದಿಸುವ ವ್ಯಾಸರಿಂದ ಉಪದೇಶಿಸಲ್ಪಟ್ಟ ಬ್ರಹ್ಮಸೂತ್ರಗಳಿಗೆ, ಶ್ರೀ ಶಂಕರಾಚಾರ್ಯರು ವೇದವ್ಯಾಸರನ್ನು ಜಯಿಸಿ ಅದ್ವೈತಪರವಾಗಿ ವ್ಯಾಖ್ಯಾನಮಾಡಿದರು" ಎಂದು ಹೇಳುವದರ ಮೂಲಕ ವೇದವ್ಯಾಸರ ಬ್ರಹ್ಮಸೂತ್ರಗಳಿಗೆ ಸ್ವಾಭಾವಿಕವಾಗಿ ಭೇದಪ್ರತಿಪಾದನೆಯಲ್ಲಿ ತಾತ್ಪರ್ಯವಿದೆಯೆಂಬುದನ್ನು ಸ್ಪಷ್ಟಪಡಿಸಿರುವವು.

ಅದ್ವೈತಸಿದ್ಧಿಯಂತಹ ಪ್ರಸಿದ್ಧ ಗ್ರಂಥಕಾರರಾದ, ಅದ್ವೈತತತ್ವನಿಷ್ಣಾತರಾದ ಮಧುಸೂದನ ಸರಸ್ವತಿಗಳಂತಹ ಕುಶಾಗ್ರಮತಿಗಳೂ ಸಹ ವ್ಯಾಸಸೂತ್ರಗಳಲ್ಲಿ ಐಕ್ಯವಾದ ಹಾಗೂ ಅದಕ್ಕೆ ಸಾಧಕವಾದ ಪ್ರಮೇಯಜಾಲವನ್ನು ಕಾಣದೇ ನಿರಾಶರಾಗಿ ರೋಷಗೊಂಡು ತಮ್ಮ ಕೃತಿಯೊಂದರಲ್ಲಿ,

ನ ಸ್ತೌಮಿ ತಂ ವ್ಯಾಸಮಶೇಷಮರ್ಥಂ
ಸಮ್ಯಕ್ ನ ಸೂತ್ರೈರಪಿ ಯೋ ಬಬಂಧ ।
ವಿನಾಽಪಿ ತೈಃ ಸಂಗ್ರಹಿತಾಽಖಿಲಾರ್ಥಂ
ತಂ ಶಂಕರಂ ನೌಮಿ ಸುರೇಶ್ವರಂ ಚ ॥

"ಅದ್ವೈತ ಹಾಗೂ ಅದ್ವೈತಸಾಧನೆಗೆ ಉಪಯುಕ್ತವಾದ ವಿಷಯಗಳನ್ನು ಭಗವಾನ್ ವ್ಯಾಸರು ತಮ್ಮ ಸೂತ್ರಗಳಲ್ಲಿ ಸಂಗ್ರಹಿಸಿರುವದಿಲ್ಲ. ಆದುದರಿಂದ ಶ್ರೀವ್ಯಾಸರನ್ನು ನಾನು ಸ್ತೋತ್ರಮಾಡುವದಿಲ್ಲ. ವ್ಯಾಸಸೂತ್ರಗಳಲ್ಲಿ ಹೇಳದಿದ್ದರೂ ಸಹ ಸೂತ್ರಗಳನ್ನು ಅವಲಂಬಿಸದೆ ಅದ್ವೈತಸಾಧಕವಾದ ಸಮಸ್ತ ವಿಷಯಗಳನ್ನು ಸಂಗ್ರಹಿಸಿದ ಶಂಕರಾಚಾರ್ಯರನ್ನು ಹಾಗೂ ಸುರೇಶ್ವರಾಚಾರ್ಯರನ್ನು ನಮಸ್ಕರಿಸುತ್ತೇನೆ" ಎಂದಿದ್ದಾರೆ. ಮಧುಸೂದನ ಸರಸ್ವತಿಗಳ ಅಭಿಪ್ರಾಯವನ್ನು ಪುಷ್ಟೀಕರಿಸುತ್ತಾ ಬ್ರಹ್ಮಾನಂದೀ ವ್ಯಾಖ್ಯಾನಕಾರರೂ ಸಹ,

ಸೂತ್ರೈರಪಿ ವ್ಯಾಸಃ ಸರ್ವಾರ್ಥಾನ್ ನ ಬಬಂಧ ಸಂಗ್ರಹೀತವಾನ್
ಶಂಕರಾಚಾರ್ಯಸ್ತು ಸೂತ್ರಾಣ್ಯನಾಶ್ರಿತ್ಯಾಪಿ ಸರ್ವಾರ್ಥಾನ್
ಸಂಗೃಹೀತವಂತಃ ಸೂತ್ರಾನುಕಾರ್ಯಾನಪಿ ವಕ್ತುತ್ವಾತ್ ॥

ಶಂಕರಾಚಾರ್ಯರ ವಿಷಯರಚನೆಯೇ ಸೂತ್ರಗಳನ್ನು ಆಶ್ರಯಿಸದೆ ಪ್ರವೃತ್ತವಾಗಿರುವದೆಂದು ಹೇಳಿರುವರು.

ಹೀಗೆಯೇ ಕೂಲಂಕಷವಾಗಿ ಅಧ್ಯಯನ ಮಾಡಿದಾಗ ಶಂಕರಾಚಾರ್ಯರ ಅದ್ವೈತಪರಭಾಷ್ಯ, ವ್ಯಾಸಸೂತ್ರಾಭಿಪ್ರಾಯವನ್ನು ಆವಿಷ್ಕರಿಸುವ ವ್ಯಾಖ್ಯಾನವಾಗಿರದೇ, ಸೂತ್ರಕ್ಕೆ ಪ್ರತಿಸ್ಪರ್ಧಿಯಂತಿದೆ ಎಂಬ ಅಭಿಪ್ರಾಯವನ್ನು ವಿಮರ್ಶಕರು ಹೊಂದಬಹುದಾಗಿದೆ. ಇದರಿಂದ ಅದ್ವೈತತತ್ತ್ವ ವ್ಯಾಸಸೂತ್ರಸಮ್ಮತವಲ್ಲವೆಂದು ಸ್ಪಷ್ಟವಾಗುವದು. ಸೈದ್ಧಾಂತಿಕ ಶಿರೋಮಣಿಗಳಾದ, ಪ್ರಾತಸ್ಮರಣೀಯ ಸುನಾಮಧೇಯರಾದ ಶ್ರೀ 108 ಶ್ರೀಮತ್ಸತ್ಯಧ್ಯಾನತೀರ್ಥ ಪೂಜ್ಯಚರಣರ ಅಮರ ಕೃತಿಯಾದ "ಭೇದಪರಾಣ್ಯೇವ ಖಲು ಬ್ರಹ್ಮಸೂತ್ರಾಣಿ" ಎಂಬ ಪ್ರೌಢ ಪ್ರಬಂಧ ವಿಶೇಷದಲ್ಲಿ ಎಲ್ಲ ಸೂತ್ರಗಳು ಜೀವ-ಬ್ರಹ್ಮ-ಭೇದ ಪರವಾಗಿ ಹೊರಟಿವೆಯೆಂಬುದನ್ನು (ಪರಕೀಯರ ದೃಷ್ಟಿಯಿಂದ) ಸ್ಪಷ್ಟಪಡಿಸಿರುವರು. ಗ್ರಂಥಗೌರವ ಭಯದಿಂದ ಹೆಚ್ಚಿನ ವಿಷಯಗಳನ್ನು ಇಲ್ಲಿ ಸಂಗ್ರಹಿಸಲಾಗುವದಿಲ್ಲ. ಹೆಚ್ಚಿನ ವಿಷಯಗಳನ್ನಪೇಕ್ಷಿಸುವವರು "ವ್ಯಾಸತಾತ್ಪರ್ಯನಿರ್ಣಯ" ಹಾಗೂ "ವೇದಾಂತಸಿದ್ಧಾಂತ" ಇವೇ ಮುಂತಾದ ನವೀನ ಗ್ರಂಥಗಳ ವಿಮರ್ಶಾತ್ಮಕವಾಗಿ ಪ್ರವೃತ್ತವಾದ ನನ್ನ "ವ್ಯಾಸಸಿದ್ಧಾಂತದರ್ಪಣ"ವೆಂಬ ವಿಸ್ತೃತ ಹೊತ್ತಿಗೆಯನ್ನು ನೋಡಬಹುದು. "ಓಂ ಭೇದವ್ಯಪದೇಶಾತ್ ಓಂ, ಓಂ ಭೇದವ್ಯಪದೇಶಾಚ್ಚಾನ್ಯಃ ಓಂ, ಓಂ ಅಂಶೋ ನಾನಾ ವ್ಯಪದೇಶಾತ್ ಓಂ, ಓಂ ಆನಂದಮಯೋಽಭ್ಯಾಸಾತ್ ಓಂ, ಓಂ ಸರ್ವಧರ್ಮೋಪಪತ್ತೇಶ್ಚ ಓಂ, ಓಂ ಜಗದ್ವ್ಯಾಪಾರವರ್ಜ್ಯಂ ಓಂ, ಓಂ ಭೋಗಮಾತ್ರಸಾಮ್ಯಲಿಂಗಾಚ್ಚ ಓಂ" ಇತ್ಯಾದಿ ಅನೇಕ ಸೂತ್ರಗಳು ಮುಕ್ತಕಂಠದಿಂದ ಶ್ರೀಮನ್ನಾರಾಯಣನ ಸರ್ವೋತ್ತಮತ್ವ ಗುಣಪೂರ್ಣ ತತ್ತ್ವಗಳನ್ನು ಸಂಸ್ಥಾಪಿಸಿ, ಜೀವಬ್ರಹ್ಮರಿಗೆ ನಿತ್ಯಭೇದಪ್ರತಿಪಾದನೆಯೊಂದಿಗೆ ಜೀವ-ಬ್ರಹ್ಮರ ಬಿಂಬ-ಪ್ರತಿಬಿಂಬ ಭಾವ, ಜೀವ-ತಾರತಮ್ಯ, ಆ ಮುಕ್ತಾನಂದ ತಾರತಮ್ಯಗಳನ್ನು ಹೊಗಳುತ್ತಿದ್ದರೂ ಸಹ, ಸೂತ್ರಾಭಿಪ್ರಾಯಕ್ಕೆ ವಿರುದ್ಧವಾದ ಶರೀರ-ಶರೀರ ಭಾವ, ಆನಂದ-ಸಾಮ್ಯ ಇವೇ ಮುಂತಾದ ಸೂತ್ರ-ಶ್ರುತಿ-ಸ್ಮೃತಿ-ಬಹಿರ್ಭೂತವಾದ ವಿಷಯಗಳನ್ನಂಗೀಕರಿಸಿರುವದರಿಂದ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಸಿದ್ಧಾಂತವೂ ಸಹ ವ್ಯಾಸಸಮ್ಮತವಲ್ಲವೆಂಬುದು ನಿರ್ವಿವಾದ. ಬ್ರಹ್ಮಸೂತ್ರಗಳಲ್ಲಿ ಹಾಸುಹೊಕ್ಕಾಗಿ ಹೆಣೆಯಲ್ಪಟ್ಟ ಪ್ರಮೇಯಜಾಲದಿಂದಲೇ ರಚಿತವಾದ ತತ್ತ್ವಗಳನ್ನು ಶ್ರೀಮದಾಚಾರ್ಯರ ದ್ವೈತಸಿದ್ಧಾಂತದಲ್ಲಿ (ಇದನ್ನು ಮುಂದೆ ಉಪಪಾದಿಸಲಾಗುವದು) ಕಾಣಬಹುದಾದ್ದರಿಂದ ದ್ವೈತಸಿದ್ಧಾಂತವೇ ವ್ಯಾಸಸಮ್ಮತವೆಂದು ಸ್ಪಷ್ಟವಾಗುವದು.

## IV

ಅವಿದ್ಯಾ ಪಟಲಪಿಹಿನೇತ್ರಗಳಿಂದೊಡಗೂಡಿದ ವ್ಯಾಖ್ಯಾತೃಗಳಿಂದ ವಿಪರೀತವಾಗಿ ವಿವರಿಸಲ್ಪಟ್ಟ ಬ್ರಹ್ಮಸೂತ್ರಗಳಿಗೆ ವ್ಯಾಸಸಮ್ಮತವಾದ ಅರ್ಥವನ್ನು ಪ್ರಕಾಶಪಡಿಸಲು "ಬ್ರಹ್ಮಸೂತ್ರಭಾಷ್ಯ", "ಅಣುಭಾಷ್ಯ", "ಅನುವ್ಯಾಖ್ಯಾನ", "ನ್ಯಾಯವಿವರಣ"ಗಳೆಂಬ ನಾಲ್ಕು ಭಾಷ್ಯಗ್ರಂಥಗಳನ್ನು ಶ್ರೀಮದಾಚಾರ್ಯರು ರಚಿಸಿದರು. ಇವುಗಳಲ್ಲಿ ಬ್ರಹ್ಮಸೂತ್ರಭಾಷ್ಯವು ಅನೇಕ ಅಪೂರ್ವ ಪ್ರಮಾಣಪುಂಜಗಳಿಂದ ಸೂತ್ರಗಳ ನಿಶ್ಚಿತಾರ್ಥವನ್ನು ವಿವರಿಸುವದು. ಸಕಲ ಅಪವ್ಯಾಖ್ಯಾನನಿರಸನಪುರಸ್ಸರವಾಗಿ ಭಾಷ್ಯಾಭಿವೃದ್ಧಿಯ ಅಸಂಖ್ಯಾತ ನ್ಯಾಯರತ್ನಗಳನ್ನು ಹೊರತೆಗೆದು, ಅವುಗಳ ಪ್ರಜ್ವಲಿಸುವ ಪ್ರಕಾಶದ ಹಿನ್ನೆಲೆಯಲ್ಲಿ ಭಾಷ್ಯೋಕ್ತಾರ್ಥಗಳನ್ನು ಪ್ರಕಾಶಪಡಿಸುವ ವ್ಯಾಖ್ಯಾಪ್ರವಾಹವೇ ಅನುವ್ಯಾಖ್ಯಾನವು. ಸೂತ್ರಾಭಿಮತ ಪೂರ್ವಪಕ್ಷಸಿದ್ಧಾಂತ ನ್ಯಾಯಸಂಗ್ರಾಹಕ ಅತಿಗಂಭೀರ ಗ್ರಂಥವೇ ನ್ಯಾಯವಿವರಣವು. ಬಹ್ವರ್ಥಗರ್ಭಿತವಾದ ಸಂಕ್ಷಿಪ್ತ ಶಬ್ದಗಳಿಂದ ಸೂತ್ರಾರ್ಥವರ್ಣನಪರವಾದುದು ಅಣುಭಾಷ್ಯವು. "ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ" ಎಂಬ ಉಕ್ತಿಗೆ ಕಳಶಪ್ರಾಯರಾದ ಸಂಶಯ-ವಿಪರೀತಜ್ಞಾನ-ಅಜ್ಞಾನಗಳಿಂದ ರಹಿತರಾಗಿ, ಅನ್ಯರಲ್ಲಿಯ ಈ ದೋಷಗಳನ್ನು ದೂರಮಾಡಲು ಸಮರ್ಥರಾದ ಶ್ರೀಮದ್ವಾಯುದೇವರ ತೃತೀಯಾವತಾರರೆಂದು ಶ್ರುತಿ-ಸ್ಮೃತಿ-ಪುರಾಣ-ಇತಿಹಾಸಗಳಲ್ಲಿ ಪ್ರಥಿತರಾದ ಶ್ರೀಮದಾಚಾರ್ಯರಿಂದ ಸೂತ್ರಕಾರರ ಅನುಜ್ಞಾನುಸಾರವಾಗಿ ಸಜ್ಜನರಿಗೆ ಶುಭಮಾರ್ಗ-ದರ್ಶನಕ್ಕಾಗಿ ರಚಿತವಾದ ಈ ಪ್ರಬಂಧಗಳೆಲ್ಲವೂ, ಸಕಲ ಲಕ್ಷಣಗಳಿಂದ ಲಕ್ಷಿತವಾಗಿ ಕಲಂಕಲೇಶರಹಿತವಾಗಿರುವದರಿಂದ ನಾಯಕರುಗಳಿಂದಲೂ ಮಾನ್ಯವಾಗಿ ವೇದವ್ಯಾಸದೇವರಿಗೆ ಅತ್ಯಂತ ಪ್ರಿಯವಾಗಿರುವದೆಂಬುವರಲ್ಲಿ ಯಾವ ಸಂಶಯವೂ ಇಲ್ಲ. ಅದುದರಿಂದಲೇ "ಈ ಗ್ರಂಥಭಾವವನ್ನು ಸ್ವಶಕ್ತ್ಯನುಸಾರವಾಗಿ ಆವರ್ತನನಿರತರಾದ ದೇವತೆಗಳನ್ನು ಮೊದಲ್ಗೊಂಡು ನರಾಂತರಾದ ಸಕಲರೂ ಮುಕ್ತಿಭಾಗ್ಯವನ್ನು ಹೊಂದುವರು" ಎಂಬುದು ಅಭಿಯುಕ್ತರ ವಚನವಾಗಿರುವದು.

ಪಂಡಿತರುಗಳಿಂದಲೂ ದುರ್ನಿರೂಪವಾದ ಶ್ರೀಮದಾಚಾರ್ಯರ ಈ ಗ್ರಂಥಗಳಿಗೆ ದೇವಾಂಶಸಂಭೂತರನೇಕರು ವ್ಯಾಖ್ಯಾನಗಳನ್ನು ರಚಿಸಿ, ಸಜ್ಜನರನ್ನು ಅನುಗ್ರಹಿಸಿದ್ದಾರೆ. ಇಂತಹ ದೇವಾಂಶಸಂಭೂತ ವ್ಯಾಖ್ಯಾಕೃತಿಗಳಲ್ಲಿ ಇಂದ್ರಾವತಾರಗಳಾದ ಶ್ರೀಮಜ್ಜಯತೀರ್ಥರ ಪಾತ್ರ ಅತ್ಯಂತ ಮಹತ್ವದ್ದು , ಹಾಗೂ ಅನನ್ಯ ಸಾಧಾರಣವಾದುದು. ಶ್ರೀಜಯತೀರ್ಥ ಪೂಜ್ಯಚರಣರು ಅವತರಿಸಿ ಶ್ರೀಮದಾಚಾರ್ಯರ ಅಮರ ಕೃತಿಗಳಿಗೆ ವ್ಯಾಖ್ಯಾನ ರಚಿಸಿರದಿದ್ದರೆ ಸೂತ್ರಸದೃಶವಾದ ಶ್ರೀಮದಾಚಾರ್ಯರ ವಾಕ್‌ಸ್ವಾರಸ್ಯ, ಅವುಗಳ ನಿಜವಾದ ಅರ್ಥ ಸಜ್ಜನರಿಗೆ ದೊರೆಯುತ್ತಿದ್ದಿಲ್ಲವೆಂಬುದು ಎಲ್ಲರೂ ಒಪ್ಪಬೇಕಾವ ವಿಷಯವಾಗಿರುವದು. ಶ್ರೀಮದಾಚಾರ್ಯರ ಕೃತಿಗಳಿಗೆ ಅಸದೃಶ ವ್ಯಾಖ್ಯಾನ ರಚಿಸಿರುವದರ ಮೂಲಕ ಶ್ರೀಜಯತೀರ್ಥರು 'ಟೀಕಾಚಾರ್ಯ'ರೆಂಬ ಅನ್ವರ್ಥನಾಮದಿಂದ ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಹೊಂದಿರುವರು. ಅಖಂಡಿತವಾದ ಚಿತ್ರ ವಿಚಿತ್ರ ಪದಗಳಿಂದೊಡಗೂಡಿ ಶೋಭಿಸುತ್ತಿರುವ ಶ್ರೀಜಯತೀರ್ಥಪೂಜ್ಯಚರಣರ ಟೀಕಾವಾಗ್ಜಾಲವು, ಅಜ್ಞಾನವಿಧ್ವಂಸನ ವಿಚಕ್ಷಣವಾಗಿ ಶ್ರೀಮದಾನಂದತೀರ್ಥರು ರಕ್ಷಿಸಿಕೊಂಡು ಬಂದ ನಾರಾಯಣನೆಂಬ ನಿಧಿಯನ್ನು ಸರಿಯಾಗಿ ಪ್ರದರ್ಶಿಸುವುದರ ಮೂಲಕ ಸತ್ಸಂಪ್ರದಾಯವನ್ನು ಸಂರಕ್ಷಿಸಿ ಸಜ್ಜನರನ್ನುದ್ಧರಿಸಿರುವರು. ಕಲಿಯುಗ ಕಾಮಧೇನು ಕಲ್ಪವೃಕ್ಷರೆಂದು ಪ್ರಸಿದ್ಧರಾದ ಶ್ರೀ ರಾಘವೇಂದ್ರತೀರ್ಥ ಗುರುಸಾರ್ವಭೌಮರಂತಹ ಮಹನೀಯರೂ ಸಹ ಟೀಕಾಗಾಂಭೀರ್ಯ ಗೌರವ ಹಿರಿಮೆಯನ್ನು "ಟೀಕಾಗಾಂಭೀರ್ಯಮುದ್ಧರ್ತುಂ ವ್ಯಾಸತೀರ್ಥಾದಯಃ ಕ್ಷಮಾಃ" ಎಂದು ಗೌರವಪೂರ್ವಕ ಹೊಗಳಿರುವರು. ಶ್ರೀಜಯತೀರ್ಥರ ಇಂತಹ ಸರ್ವಾಂಗ ಪರಿಪೂರ್ಣ ಟೀಕಾಗ್ರಂಥಗಳ ಉದಯದಿಂದಾಗಿ "ತರ್ಕ-ಕುತರ್ಕಗಳಿಂದ ಅಂದಿನ ಸಮಯದಲ್ಲಿ ಮಹತ್ವವನ್ನು ಹೊಂದಿದ ತಾರ್ಕಿಕಮತವು ಆಭಾಸವನ್ನು ಹೊಂದಿತು. ಪ್ರಭಾಕರರ ಪ್ರಕ್ರಿಯೆಯು ಶೋಭಾಹೀನವಾಯಿತು. ಬೌದ್ಧಾದಿ ಪಾಷಂಡಿಗಳ ಯುಕ್ತಿಗಳು ಹೆದರಿ ದೂರ ಸರಿದವು. ಇವರ ಅಸದೃಶಭಾಷ್ಯವ್ಯಾಖ್ಯಾನದಿಂದಾಗಿ ಶಾಂಕರಭಾಷ್ಯ, ಆದರ ವ್ಯಾಖ್ಯಾನಗಳಾದ ಭಾಮತಿ, ವಿವರಣ ಮುಂತಾದವುಗಳು ಲಜ್ಜೆಯಿಂದ ತಮ್ಮ ಮುಖ ತಗ್ಗಿಸುವಂತಾಯಿತು, ಭಾಸ್ಕರಾದಿಗಳು ಈ ವ್ಯಾಖ್ಯಾನ ಉತ್ಕರ್ಷಯಿಂದ ಅತ್ಯಂತ ಚಿಂತಾಕುಲರಾದರು." ಎಂದು ಶ್ರೀ ಸತ್ಯಪ್ರೀಯತೀರ್ಥರು ಟೀಕಾಗಾಂಭೀರ್ಯವನ್ನು ಅತ್ಯಂತ ಸ್ವಾರಸ್ಯವಾಗಿ ವರ್ಣಿಸಿ, "ಇಂತಹ ಟೀಕಾಕೃತ್ಪಾದರ ವಾಗ್ಧಾಟಿಯು ನಮ್ಮ ಮನದಲ್ಲಿ ಸದಾ ಇರಲಿ" ಎಂದು ಪ್ರಾರ್ಥಿಸಿರುವರು. ಈ ರೀತಿಯಾಗಿ ಸರ್ವರಿಂದಲೂ ಜೇಗೀಯಮಾನವಾದ ಪರಮಪವಿತ್ರತಮವಾದ ಟೀಕಾಗ್ರಂಥಗಳಲ್ಲಿ ಶ್ರೀಮದಾಚಾರ್ಯರಿಂದ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರ ಪ್ರಾರ್ಥನಾನುಸಾರವಾಗಿ ರಚಿಸಲ್ಪಟ್ಟ ಶ್ರೀಮದನುವ್ಯಾಖ್ಯಾನದ ವ್ಯಾಖ್ಯಾರೂಪವಾಗಿ ಹೊರಟಿರುವ "ಶ್ರೀಮನ್ನ್ಯಾಯಸುಧಾ" ಗ್ರಂಥವು "ಮಹತ್ವಾದ್ಭಾರವತ್ವಾಚ್ಚ" ಎಂಬ ರೀತಿಯಂತೆ, ಅರ್ಥಗಾಂಭೀರ್ಯ ಶಬ್ದಗಾಂಭೀರ್ಯ ಎರಡರ ದೃಷ್ಟಿಯಿಂದಲೂ ಅತ್ಯಂತ ಮಹತ್ವದ್ದಾಗಿ, ಮಧ್ವ ವಾಙ್ಮಯದಲ್ಲಿಯೇ ಅನನ್ಯಸದೃಶವಾದುದೆಂದು ಪ್ರಸಿದ್ಧವಾಗಿರುವದು. ಆಮೂಲಾಗ್ರತರ್ಕಜಟಿಲನಿಬದ್ಧವಾಗಿ, ವ್ಯಾಕರಣವಿಚಾರಗಳಿಂದ ಪರಿಷ್ಕೃತವಾಗಿ ಮೀಮಾಂಸಾನಯಗಳಿಂದ ವ್ಯಾಪಿಸಿ ವೇದಾಂತ ಅಪವ್ಯಾಖ್ಯಾನಗಳ ಹುಂಕಾರವನ್ನಡಗಿಸಿ, ಸಿದ್ಧಾಂತಸ್ಥಾಪಕವಾದ ಈ ನ್ಯಾಯಸುಧೆಯು ತಂತ್ರಚತುಷ್ಟಯಾತ್ಮಕವಾದ ಶ್ರೇಷ್ಠ ಪ್ರಬಂಧವಾಗಿರುವದು. ಈ ಗ್ರಂಥದ "ಪ್ರತ್ಯಕ್ಷರ ಪ್ರತಿಪದವೂ ಸಹ ಅನೇಕ ರಹಸ್ಯಾರ್ಥಗರ್ಭಿತವಾಗಿರುವುದು", "ಈ ಗ್ರಂಥವು ಲೌಕಿಕ-ವೈದಿಕ ಸಂಪತ್ತನ್ನು ಕೊಡುವ ವಿಷಯದಲ್ಲಿ ನಾವೇ ಸಾಕ್ಷಿಗಳು", "ಸುಧಾ ಓದಬೇಕು ಸುಜನರು", "ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ" ಇವೇ ಮುಂತಾದ ಶ್ರೀ ರಾಘವೇಂದ್ರತೀರ್ಥರು, ಶ್ರೀ ವಾದಿರಾಜತೀರ್ಥರು, ಶ್ರೀ ಪುರಂದರದಾಸರಂತಹ ದೇವಾಂಶಸಂಭೂತ ಮಹಾನುಭಾವರ ವಚನಗಳಿಂದ ಶ್ರೀ ಸುಧಾ ಮಹಾತ್ಮೆಯು ವರ್ಣನಾತೀತವಾದುದೆಂದು ಸ್ಪಷ್ಟವಾಗುವದು. ಅಮೋಘಮಹಿಮಾಯುತರಿಂದಲೂ ತಿಳಿಯಲು ಕಷ್ಟಸಾಧ್ಯವಾದ ಶ್ರೀಸುಧಾ ರಹಸ್ಯಸ್ವಾರಸ್ಯವನ್ನು ತಿಳಿಸಲು ಶ್ರೀ ಶ್ರೀಪಾದರಾಜರು, ಶ್ರೀ ವಾದಿರಾಜರು, ಶ್ರೀರಾಘವೇಂದ್ರರು, ಶ್ರೀವಿದ್ಯಾಧೀಶರು, ಶ್ರೀಸತ್ಯವ್ರತರು, ಶ್ರೀಯಾದವಾರ್ಯರು, ಶ್ರೀ ಶ್ರೀನಿವಾಸರು, ಶ್ರೀ ಸತ್ಯನಾಥರು, ಶ್ರೀ ವ್ಯಾಸತತ್ವಜ್ಞರು, ಇವರೇ ಮುಂತಾದ ಮಹಾನುಭಾವರು ವ್ಯಾಖ್ಯಾನಗಳನ್ನು ರಚಿಸಿ ಶ್ರೀಮನ್ನ್ಯಾಯಸುಧಾವು ಜಗತ್ತಿನಲ್ಲಿ ಪ್ರಕಾಶಿತವಾಗುವಂತೆ ಮಾಡಿರುವರು.

## V

ಹೀಗೇ ಇಪ್ಪತ್ತಕ್ಕೂ ಹೆಚ್ಚು ವ್ಯಾಖ್ಯಾನಗಳಿಂದ ಶ್ರೀಮನ್ನ್ಯಾಯಸುಧಾ ಸುಶೋಭಿತವಾಗಿದ್ದರೂ ಸಹ ಕರಾಲ ಕಲಿಮಹಾತ್ಮೆಯಿಂದ ಇವುಗಳಲ್ಲಿ ಕೆಲವು ಸಮಗೆ ಉಪಲಬ್ಧವಾಗದಿರುವದು ನಮ್ಮ ದುರದೃಷ್ಟಕರ ಸಂಗತಿ. ಮೂಲ ಸುಧೆಯೂ ಸಹ ಉಪಲಬ್ಧವಿರದ ಇಂದಿನ ದುಸ್ಥಿತಿಯನ್ನು ಅರಿತ ವಿದ್ವಾನ್ ಶಿರೋಮಣಿ ಇತ್ಯಾದಿ ಪದವೀಭಾಜರಾಗಿ ಹರಿಗುರುಭಕ್ತಿಸೇವಾಪರಾಯಣರಾಗಿ ಶ್ರೀಮನ್ಮಧ್ವಶಾಸ್ತ್ರ ಪ್ರವಚನನಿರತರಾದ ಶ್ರೀ।। ಮ।।ಶಾ।।ಸಂ।। ರಾದ ಮುಳಬಾಗಿಲಿನ ಎಚ್.ಕೆ. ರಂಗನಾಥಾಚಾರ್ಯರು ತಮ್ಮ ಸಮರ್ಥ ಸಂಪಾದಕತ್ವದಲ್ಲಿ ಶ್ರೀಮದ್ರಾಘವೇಂದ್ರತೀರ್ಥರ ಪರಿಮಳವ್ಯಾಖ್ಯಾನ ಸಹಿತವಾಗಿ ಶ್ರೀಮನ್ನ್ಯಾಯಸುಧಾ ಗ್ರಂಥದ ಮುದ್ರಣ ಕಾರ್ಯ ಕೈಗೊಂಡು ಪ್ರಕಾಶಿಸುತ್ತಿರುವದು ನಿಜವಾಗಿಯೂ ಸಂತೋಷದ ಹಾಗೂ ಹೆಮ್ಮೆಯ ವಿಷಯ. ಈಗಾಗಲೇ "ಸತ್ತರ್ಕದೀಪಾವಲೀ" "ವಾಗ್ವಜ್ರ"ಗಳಂತಹ ಇದುವರೆಗೂ ಅಪ್ರಕಾಶಿತವಾಗಿಯೇ ಉಳಿದಿದ್ದ ಅಮೌಲ್ಯ ಕೃತಿಗಳನ್ನು ಪ್ರಕಾಶಪಡಿಸಿರುವದಲ್ಲದೆ, ಈಶ, ತಲವಕಾರ, ಕಾಠಕ ಮುಂತಾದ ಉಪನಿಷತ್ತುಗಳನ್ನು ಅರ್ಥಸಹಿತವಾಗಿ ಪ್ರಕಾಶಿಸಿದ್ದಾರೆ. 'ಮಧ್ವಸಿದ್ಧಾಂತ'ವೆಂಬ ವಿಮರ್ಶಾತ್ಮಕ ಕೃತಿಯನ್ನು ಬರೆಯುವದಲ್ಲದೆ ಮೂವತ್ತಕ್ಕೂ ಹೆಚ್ಚು ವರುಷಗಳಿಂದ ಪ್ರಕಟವಾಗುತ್ತಿದ್ದ ಶ್ರೀಮದುತ್ತರಾದಿಮಠದ ಮುಖಪತ್ರಿಕೆಯಾದ "ಶ್ರೀಸುಧಾ" ಮಾಸಪತ್ರಿಕೆಯ ಸಂಪಾದಕತ್ವ ನಿರ್ವಹಿಸಿಕೊಂಡು ಬಂದು ಎಲ್ಲ ಆಸ್ತಿಕವರ್ಗಕ್ಕೂ ಚಿರಪರಿಚಿತರಾಗಿರುವರು. ಇಳಿಯ ವಯಸ್ಸಿನವರಾದರೂ ಎಳೆಯ ವಯಸ್ಸಿನ ತರುಣರಲ್ಲಿ ಕಾಣಬರದ ಸ್ಫೂರ್ತಿ ಉತ್ಸಾಹಗಳಿಂದ ಇವರು ಕಾರ್ಯಮಾಡುತ್ತಿರುವದು ಅನುಕರಣೀಯವಾಗಿರುವದು. ಇವರಿಂದಲೇ ಮುಳಬಾಗಿಲಿನಲ್ಲಿ "ಶ್ರೀ ಶ್ರೀಪ್ರೇಕ್ಷಾನಿಧಿಗಳು (ರಾಮಣ್ಣಾಚಾರ್ಯ)" ಶ್ರೀಗಳವರ ಅಪೇಕ್ಷೆಯಂತೆ ಸಂಸ್ಥಾಪಿತವಾದ ಶ್ರೀ ಶ್ರೀರಾಘವೇಂದ್ರತೀರ್ಥಾದಿ ಬೃಂದಾವನಗಳ ಸುವರ್ಣ ಮಹೋತ್ಸವದ ಶುಭಸಂದರ್ಭದ ಸವಿನೆನಪಿಗಾಗಿ ಈ ಗ್ರಂಥ ಪ್ರಕಾಶಿತವಾಗುತ್ತಿರುವದು ಸ್ವಾಗತಾರ್ಹವಾಗಿರುವದು.

ಬೆಲೆಗಳು ಗಗನದೆತ್ತರಕ್ಕೆ ಏರುತ್ತಿರುವ ಇಂದಿನ ಸಮಯದಲ್ಲಿಯೂ ಸಹ ಧೈರ್ಯವಾಗಿ ಮುನ್ನುಗ್ಗಿ ಕಾರ್ಯೋನ್ಮುಖರಾದ ವಿದ್ವಾನ್ ಶ್ರೀ ರಂಗನಾಥಾಚಾರ್ಯರ ಈ ಪರಮ ಮಂಗಲಕಾರ್ಯಕ್ಕೆ ಎಲ್ಲ ಆಸ್ತಿಕ ಮಹಾಶಯರುಗಳ ಸಹಾಯ ಸಹಕಾರವನ್ನು ಕೋರಿ ನಾನು ಈ ಲೇಖನದಿಂದ ವಿರಮಿಸುತ್ತೇನೆ.

ಇತಿ ಶಮ್ ॥

*ಹನುಮೇಶಾಚಾರ್ಯ ಗಂಗೂರ*

ರುಧಿರೋದ್ಗಾರಿ ಸಂವತ್ಸರ, ಚೈತ್ರ ಶು. 14
ಶ್ರೀಪಾದರಾಜರ ಆರಾಧನಾ.



॥ ಶ್ರೀಬಾದರಾಯಣೋ ವಿಜಯತೇತರಾಮ್ ॥

# ಪ್ರಕಾಶಕರ ನುಡಿ

ಪರಮಪವಿತ್ರವಾದ ಮಹಾಕ್ಷೇತ್ರ ಮುಳಬಾಗಿಲು ಜ್ಞಾನಿವರೇಣ್ಯರ ಬೀಡು. ಈ ಕ್ಷೇತ್ರದಲ್ಲಿ ಶ್ರೀಅಕ್ಷೋಭ್ಯತೀರ್ಥರು ವಿದ್ಯಾರಣ್ಯರನ್ನು "ತತ್ವಮಸಿ" ಎಂಬ ವಿಷಯದ ವಾದದಲ್ಲಿ ಸೋಲಿಸಿ ಶ್ರೀಗಳವರಿಂದಲೇ ಅಂಗಾರದಿಂದ ಬರೆದು ಉದ್ಭವವಾದ ಯೋಗಾನರಸಿಂಹದೇವರು, ಶ್ರೀಅರ್ಜುನಪ್ರತಿಷ್ಠಿತ ಪ್ರಾಣದೇವರು, ಶ್ರೀ ಅಗಸ್ತ್ಯಮುನಿಗಳಿಂದ ಪ್ರತಿಷ್ಠಿತವಾದ ಶ್ರೀ ರುದ್ರದೇವರು, ಶ್ರೀ ಶ್ರೀಪಾದರಾಜರಿಂದ ಪ್ರತಿಷ್ಠಿತಗೊಂಡ ಶ್ರೀ ಲಕ್ಷ್ಮೀನಾರಾಯಣದೇವರು, ಶ್ರೀ ವ್ಯಾಸರಾಜರಿಂದ ಪ್ರತಿಷ್ಠಿತಗೊಂಡ ಶ್ರೀ ಪ್ರಾಣದೇವರು ಹಾಗೂ ಶ್ರೀ ವ್ಯಾಸರಾಜಗುರುಸಾರ್ವಭೌಮರ ಗುರುವರೇಣ್ಯರಾದ ಶ್ರೀ ಶ್ರೀಪಾದರಾಜರ ಮೂಲ ವೃಂದಾವನದಿಂದ ಕಂಗೊಳಿಸುತ್ತಿದೆ.

ಈ ಕ್ಷೇತ್ರದಲ್ಲಿ ಜ್ಞಾನಿಗಳಾದ ಶ್ರೀ ಶ್ರೀಪಾದರಾಜಮಠಾಧೀಶರಾದ ಪರಮಪೂಜ್ಯ ಶ್ರೀ 1008 ಶ್ರೀ ಸುಧೀನಿಧಿತೀರ್ಥ ಶ್ರೀಪಾದಂಗಳವರ ಶಿಷ್ಯರಾದ ಶ್ರೀ 108 ಶ್ರೀ ಪ್ರೇಕ್ಷಾನಿಧಿತೀರ್ಥರು ಸದಾ ಮಧ್ವಸಿದ್ಧಾಂತದ ಗ್ರಂಥಗಳ ಪಾಠ - ಪ್ರವಚನ - ಪಾರಾಯಣ ಹಾಗೂ ಅನ್ನದಾನದಲ್ಲಿ ನಿರತರಾಗಿದ್ದರು. ವ್ಯಾಸತ್ರಯ ಗ್ರಂಥಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಹೊಂದಿದ್ದರು. ಶ್ರೀಗಳವರ ಇಚ್ಛೆಯಂತೆ ವಿದ್ವಾಂಸರಾದ ಶ್ರೀ ಹೆಬ್ಬಣಿ ರಂಗನಾಥಾಚಾರ್ಯರ ನೇತೃತ್ವದಲ್ಲಿ, ಮುಳಬಾಗಿಲಿನಲ್ಲಿ ಕ್ರಿ.ಶ. 1943ರಲ್ಲಿ ಕಲ್ಪವೃಕ್ಷ - ಕಾಮಧೇನು - ಭಕ್ತಾಭೀಷ್ಟಪ್ರದಾಯಕರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರ ಮೃತ್ತಿಕಾ ವೃಂದಾವನವು ಪ್ರತಿಷ್ಠಾಪಿತವಾಗಿ ನಿರಂತರವಾಗಿ ಅನೇಕ ಧಾರ್ಮಿಕ ಕಾರ್ಯಕ್ರಮಗಳು ನಡೆಸಿಕೊಂಡು ಬಂದಿವೆ.

ವಿದ್ವಾಂಸರಾದ ಶ್ರೀ ಹೆಬ್ಬಣಿ ರಂಗನಾಥಾಚಾರ್ಯರು, ವಿದ್ವಾನ್ ಶಿರೋಮಣಿ ಇತ್ಯಾದಿ ಪದವಿಭಾಜರು, ಶ್ರೀ-ಹರಿ-ವಾಯು-ಗುರು-ಭಕ್ತಿಪರಾಯಣರು, ನಿರಂತರ ಪಾಠ-ಪ್ರವಚನದಲ್ಲಿ ನಿರತರಾಗಿದ್ದರು. ಇವರು ಆ ಕಾಲದಲ್ಲಿ ಅಪ್ರಕಾಶಿತವಾಗಿದ್ದ ಶ್ರೀ ವಾಗ್ವಜ್ರ, ಸತ್ತರ್ಕದೀಪಾವಳೀ, ಹಾಗೂ ಪುರುಷಸೂಕ್ತ (ಶ್ರೀರಾಯರ ವ್ಯಾಖ್ಯಾನ), ಶ್ರೀ ಹರಿವಾಯುಸ್ತುತಿ, ಈಶ, ತಲವಕಾರ, ಕಾಠಕ ಉಪನಿಷತ್‌ಗಳನ್ನು ಪ್ರಾಕೃತಭಾಷೆಯಲ್ಲಿ ಅನುವಾದ ಸಹಿತವಾಗಿ ಪ್ರಕಟಿಸಿದರು. ಅನೇಕ ಶ್ರೇಷ್ಠ ದಾಸವರೇಣ್ಯರಿಂದ ರಚಿತವಾದ ದೇವರ ನಾಮಗಳಿಂದ ಸಂಗ್ರಹವಾದ ಮಧ್ವಾಮೃತ ಮಹಾರ್ಣವ ಎಂಬ ದೇವರ ನಾಮದ ಪುಸ್ತಕ, ಮಧ್ವಸಿದ್ಧಾಂತವೆಂಬ ವಿಮರ್ಶಾತ್ಮಕ ಕೃತಿಯನ್ನು ರಚಿಸಿದ್ದಲ್ಲದೇ ಶ್ರೀಮದ್ ಉತ್ತರಾದಿಮಠದ ಮುಖಪತ್ರಿಕೆಯಾದ "ಶ್ರೀಸುಧಾ" ಮಾಸಪತ್ರಿಕೆಯ ಸಂಪಾದಕತ್ವವನ್ನು 30 ವರ್ಷಕ್ಕೂ ಹೆಚ್ಚು ಕಾಲ ನಿರ್ವಹಿಸಿಕೊಂಡು ಎಲ್ಲಾ ಆಸ್ತಿಕ ಮಾಧ್ವ ಜನತೆಗೆ ಚಿರಪರಿಚಿತರಾಗಿದ್ದರು.

"ಯದಾ ವಿರಕ್ತಃ ಪುರುಷಃ ಪ್ರಜಾಯತೇ ತದೇವ ಸಂನ್ಯಾಸವಿಧಿಃ ಶ್ರುತೌ ಶ್ರುತಃ" ಎಂಬ ವಚನಾನುಸಾರ ತಮ್ಮ 75ನೇಯ ವಯಸ್ಸಿನಲ್ಲಿ ಪಂಡಿತರಾದ ಶ್ರೀ ರಂಗನಾಥಾಚಾರ್ಯರು ವೈರಾಗ್ಯದಿಂದ ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲ ಮಹಾಸಂಸ್ಥಾನ ಶ್ರೀಮದುತ್ತರಾದಿಮಠದ ಅವಿಚ್ಛಿನ್ನ ಪರಂಪರೆಯಲ್ಲಿ ವಿರಾಜಮಾನರಾಗಿದ್ದ ಶ್ರೀ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಶ್ರೀ ಪ್ರಜ್ಞಾನನಿಧಿತೀರ್ಥರೆಂದು ನಾಮವನ್ನು ಹೊಂದಿದರು. ಶ್ರೀಗಳವರು ಅತ್ಯಂತ ಭಕ್ತಿ-ಉತ್ಸಾಹಗಳಿಂದ ಶ್ರೀಮದಾಚಾರ್ಯರಿಗೆ ಪ್ರೀತಿಕರವಾದ ಪೂಜಾ-ಪ್ರವಚನ-ಪಾಠ-ಗ್ರಂಥರಚನೆ-ಗ್ರಂಥ ಪ್ರಕಟನ ಕಾರ್ಯಗಳನ್ನು ಮುಂದುವರೆಸಿದರು. ಅಜ್ಞಾನಲೇಶರಹಿತರಾದ ಶ್ರೀವಾಯುದೇವರ ಸರ್ವಜ್ಞತ್ವ - ಸರ್ವಶಕ್ತಿತ್ವ ಪರಮಾತ್ಮಪ್ರೀತ್ಯಾಸ್ಪದ ಇತ್ಯಾದಿ ಗುಣಗಳನ್ನು ತಿಳಿಸಿಕೊಡುವ ವಾಯುಗುಣಸೌರಭವೆಂಬ ವಿಮರ್ಶಾತ್ಮಕ ಗ್ರಂಥವನ್ನು ರಚಿಸಿದರಲ್ಲದೇ ಪರಮಾತ್ಮನಿಗೆ ಪ್ರೀತಿಕರವಾದ ಅತ್ಯಮೂಲ್ಯವಾದ ಶ್ರೀಮದಾಚಾರ್ಯರ

ಸರ್ವಮೂಲ ಗ್ರಂಥಗಳನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸಿದರು. ಇಷ್ಟಕ್ಕೆ ತೃಪ್ತರಾಗದೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ರಚಿತವಾದ "ಅಸ್ತದೂಷಣಮವಂದ್ಯಭಾಷಣಂ ಲಕ್ಷಿತಂ ಸಕಲಲಕ್ಷಣೈಃ ಸಮಮ್ । ಮಾನನೀಯಮಪಿ ನಾಕಿನಾಯಕೈಃ ರೂಪಮನ್ಯಮಿವ ಧನ್ಯಮಾತ್ಮನಃ" ಇತ್ಯಾದಿ ರೀತ್ಯಾ ಕವಿಕುಲತಿಲಕರಾದ ಪಂಡಿತಾಚಾರ್ಯರಿಂದ ಉಕ್ತಮಾಹಾತ್ಮ್ಯೋಪೇತವಾದ ಶ್ರೀಮದ್ ಅನುವ್ಯಾಖ್ಯಾನಕ್ಕೆ ಅಸದೃಶವಾದ ವ್ಯಾಖ್ಯಾನ "ಶ್ರೀಮನ್ನ್ಯಾಯಸುಧಾ" ಎಂಬ ಗ್ರಂಥವನ್ನು ರಚಿಸುವುದರ ಮೂಲಕ ಶ್ರೀ ಟೀಕಾಚಾರ್ಯರೆಂದು ಜಗತ್ಪ್ರಸಿದ್ಧಿ ಹೊಂದಿದ ಶ್ರೀಮದ್ ಜಯತೀರ್ಥರ ಸೇವೆ ಮಾಡಲು ಹಾಗೂ ಕಲಿಯುಗದ ಕಾಮಧೇನು ಕಲ್ಪವೃಕ್ಷರೆಂದು ಪ್ರಸಿದ್ಧರಾದ ಶ್ರೀಮದ್ ರಾಘವೇಂದ್ರತೀರ್ಥ ಗುರುಸಾರ್ವಭೌಮರ ಸೇವೆ ಮಾಡುವ ಸಲುವಾಗಿ, "ಟೀಕಾಗಾಂಭೀರ್ಯಮುದ್ಧರ್ತುಂ ವ್ಯಾಸತೀರ್ಥಾದಯಃ ಕ್ಷಮಾಃ" ಎಂದು ಗೌರವಪೂರ್ವಕವಾಗಿ ಹೊಗಳಿರುವ ಶ್ರೀಮನ್ನ್ಯಾಯಸುಧಾಗೆ ಪರಿಮಳ ವ್ಯಾಖ್ಯಾನಸಹಿತ ಗ್ರಂಥವನ್ನು ಮೂರು ಸಂಪುಟಗಳಲ್ಲಿ ಅಂದವಾಗಿ ಮುದ್ರಿಸಿ ಪ್ರಕಟಪಡಿಸುವುದರ ಮೂಲಕ ಶ್ರೀಹರಿವಾಯುಗುರುಗಳಲ್ಲಿ ಸೇವೆ ಸಲ್ಲಿಸಿದರು.

ಶ್ರೀಪಾದರಾಜರ ಕ್ಷೇತ್ರವಾದ ಮುಳಬಾಗಿಲಿನಲ್ಲಿ ಶ್ರೀ ಪ್ರಸನ್ನ ರಾಘವೇಂದ್ರಸ್ವಾಮಿ ಮಠದ ಸಂಸ್ಥಾಪಕರಾಗಿ ಪೂಜಾ ಮಂದಿರ, ಸಭಾ ಮಂಟಪವನ್ನು ನಿರ್ಮಾಣ ಮಾಡಿ ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನಾಧೀಶರಾದ ಎಲ್ಲಾ ಪೀಠಾಧಿಪತಿಗಳನ್ನು ಆದರದಿಂದ ಗೌರವಿಸಿ, ಅನೇಕ ಪಂಡಿತರು ಹಾಗೂ ವಿದ್ಯಾರ್ಥಿಗಳನ್ನು ಸನ್ಮಾನಿಸಿ ಬಡ ಕುಟುಂಬವರ್ಗದವರ ಮಕ್ಕಳ ಉಪನಯನ ಹಾಗೂ ವಿವಾಹಗಳನ್ನು ಉಚಿತವಾಗಿ ನೆರವೇರಿಸಿ ಕ್ರಿ.ಶ. 2001ಲ್ಲಿ ತಮ್ಮ ತೊಂಬತ್ತನೆಯ ವಯಸ್ಸಿನಲ್ಲಿ ಶ್ರೀಕ್ಷೇತ್ರವಾದ ಮುಳಬಾಗಿಲಿನ ಶ್ರೀ ಪ್ರಸನ್ನ ರಾಘವೇಂದ್ರ ಸ್ವಾಮಿಗಳ ಮಠದಲ್ಲಿ ಶ್ರೀ ಪ್ರೇಕ್ಷಾನಿಧಿತೀರ್ಥರ ಸನ್ನಿಧಾನದಲ್ಲಿ ವೃಂದಾವನಸ್ಥರಾದರು.

ಇಂತಹ ಗುರುಗಳ ಪೂರ್ವಾಶ್ರಮದ ಮೊಮ್ಮಕ್ಕಳಾದ ನಾವು ಭಕ್ತಿಯಿಂದ ಪೂಜ್ಯ ಶ್ರೀ 108 ಶ್ರೀ ಪ್ರಜ್ಞಾನನಿಧಿತೀರ್ಥರ ವೃಂದಾವನ ಪ್ರವೇಶದ ದಶವಾರ್ಷಿಕೋತ್ಸವ, ಶ್ರೀ 108 ಶ್ರೀ ಪ್ರೇಕ್ಷಾನಿಧಿತೀರ್ಥರ ವೃಂದಾವನಪ್ರವೇಶದ ಸಪ್ತತಿತಮ ವರ್ಷ ಉತ್ಸವದ ಅಂಗವಾಗಿ ಹಾಗೂ ನಮ್ಮ ಪೂಜ್ಯ ಮಾತಾಪಿತೃಗಳಾದ ಶ್ರೀಮತಿ ಪದ್ಮಾ ಹಾಗೂ ಶ್ರೀ ಡಿ.ಕೆ. ನಾಗರಾಜಾಚಾರ್ಯರು ಮಾಡಿದ ಉಪಕಾರ, ಪ್ರೀತಿ ವಾತ್ಸಲ್ಯದ ಸವಿನೆನಪಿಗಾಗಿ ಶ್ರೀಮನ್ನ್ಯಾಯಸುಧಾ-ಪರಿಮಳ ಗ್ರಂಥದ ಪರಿಷ್ಕೃತ ದ್ವಿತೀಯ ಮುದ್ರಣವನ್ನು ಸುಮಾರು 2000 ಪುಟಗಳಿಂದ ಕೂಡಿದ ಎರಡು ಸಂಪುಟಗಳಲ್ಲಿ ಶ್ರೀಸುಧಾ-ಪಾಠ-ಪ್ರವಚನನಿರತರಿಗೂ ಹಾಗೂ ಶ್ರೀಸುಧಾ-ವಿದ್ಯಾರ್ಥಿಗಳಿಗೂ ಉಪಯೋಗವಾಗುವಂತೆ ಮುದ್ರಿಸಿ ಸೇವೆಯನ್ನು ಮಾತಾಪಿತೃಗಳ ಅಂತರ್ಯಾಮಿಯಾದ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಕುಲಸ್ವಾಮಿಯಾದ ಅಹೋಬಲ ಶ್ರೀನರಸಿಂಹದೇವರಲ್ಲಿ ಸಮರ್ಪಿಸುತ್ತಿದ್ದೇವೆ.

**॥ ಭೂಯಾತ್ ಶ್ರೀಪಾದರಾಜೋ ನಿಖಿಲಶುಭತತಿಪ್ರಾಪ್ತಯೇ ಸಂತತಂ ನಃ ॥**

**॥ ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ ॥**

ಪುಷ್ಯ ಶುಕ್ಲ ಅಷ್ಟಮಿ, ಭಾನುವಾರ
ಖರ ನಾಮ ಸಂವತ್ಸರ
ದಿ॥ 1-1-2012.

*ಶ್ರೀಹರಿವಾಯುಗುರ್ವನುಗ್ರಹಾಕಾಂಕ್ಷಿಗಳಾದ*
***ವ್ಯಾಸರಾಜ, ವಾಸುದೇವ, ಕೃಷ್ಣಮೂರ್ತಿ***

★ ★ ★

॥ ಶ್ರೀಬಾದರಾಯಣೋ ವಿಜಯತೇತರಾಮ್ ॥

# ಕೃತಜ್ಞತೆಗಳು

ಶ್ರೀಮಜ್ಜಗದ್ಗುರು ಶ್ರೀಮನ್ ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ ಶ್ರೀ ಉತ್ತರಾದಿಮಠಾಧೀಶ್ವರರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥರ ಕರಕಮಲಸಂಜಾತರಾದ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು ಶ್ರೀಮತ್ ಜಯತೀರ್ಥರಿಂದ ವಿರಚಿತವಾದ ಮೇರುಕೃತಿಯಾದ ಶ್ರೀಮನ್ನ್ಯಾಯಸುಧಾ-ಪರಿಮಳ ಗ್ರಂಥಕ್ಕೆ ಅನುಗ್ರಹ ಸಂದೇಶವನ್ನು ನೀಡಿ ಅವರ ಅಮೃತಹಸ್ತದಿಂದ ಉದ್ಘಾಟನೆಯನ್ನು ಮಾಡಿ ನಮ್ಮನ್ನು ಆಶೀರ್ವದಿಸಿರುವ ಗುರುಗಳ ಚರಣಾರವಿಂದಗಳಿಗೆ ನಮ್ಮ ಭಕ್ತಿಪೂರ್ವಕವಾದ ಅನಂತಾನಂತ ಶಿರಸಾಷ್ಟಾಂಗ ನಮಸ್ಕಾರಗಳು.

ನಮ್ಮ ಕೋರಿಕೆಯನ್ನು ಅಂಗೀಕರಿಸಿ, ಶ್ರೀಮನ್ನ್ಯಾಯಸುಧಾ-ಪರಿಮಳ ಗ್ರಂಥದ ದ್ವಿತೀಯ ಮುದ್ರಣ ಕಾರ್ಯಕ್ಕೆ ಸರ್ವವಿಧದಿಂದ ಮಾರ್ಗದರ್ಶನವನ್ನು ನೀಡಿ ಕರಡು ಪ್ರತಿಗಳನ್ನು ಶೋಧಿಸಿ ಸಂಪೂರ್ಣ ಸಹಾಯವನ್ನು ದಯಪಾಲಿಸಿದ ಪಂಡಿತ ಪೂಜ್ಯ ಶ್ರೀ ಗಂಗೂರು ಮಧ್ವಾಚಾರ್ಯರು, ಪಂಡಿದ ಶ್ರೀ ಅಡವಿ ಜಯತೀರ್ಥಾಚಾರ್ಯರು, ಪಂಡಿತ ಶ್ರೀ ಸತ್ಯಧ್ಯಾನಾಚಾರ್ಯ ಕಟ್ಟಿ ಹಾಗೂ ಪಂಡಿತ ಶ್ರೀ ತಿರುಮಲಾಚಾರ್ಯರಿಗೆ ನಮ್ಮ ಕೃತಜ್ಞತಾಪೂರ್ವಕ ಅನಂತ ನಮಸ್ಕಾರಗಳು.

ಈ ಗ್ರಂಥದ ಪ್ರಕಟನೆ ಕಾರ್ಯದಲ್ಲಿ ವಿಶೇಷ ಶ್ರಮವಹಿಸಿ ಸಹಕರಿಸಿದ ಪಂಡಿತ ಶ್ರೀ ಭೀಮಸೇನಾಚಾರ್ಯ ವರಪೇಡಕರ್‌ರವರಿಗೆ, ಶ್ರೀ ಶ್ರೀಪಾದರಾಜರಿಂದ ಪ್ರತಿಷ್ಠಿತವಾದ ಶ್ರೀ ಲಕ್ಷ್ಮೀನಾರಾಯಣದೇವರ ಅಪ್ರಕಟಿತ ಭಾವಚಿತ್ರವನ್ನು ನೀಡಿದ ಶ್ರೀ ಹೆ. ಬಿ. ಜಯರಾಜಾಚಾರ್ಯರಿಗೆ, ಮುದ್ರಣ ಕಾಲದಲ್ಲಿ ಕರಡು ತಿದ್ದುಪಡಿಯಲ್ಲಿ ಸಹಕರಿಸಿದ ವಿದ್ವಾನ್ ಉಂಡಾರು ಶ್ರೀನಿವಾಸಮೂರ್ತ್ಯಾಚಾರ್ಯರವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳು.

ನಮ್ಮೊಂದಿಗೆ ಸಹಕರಿಸಿ ಈ ಗ್ರಂಥದ ಅಕ್ಷರವಿನ್ಯಾಸ ಮತ್ತು ಮುದ್ರಣದ ಭಾರವನ್ನು ವಹಿಸಿಕೊಂಡು ಅತ್ಯಲ್ಪ ಕಾಲದಲ್ಲಿ ಸುಂದರವಾಗಿ, ಶುದ್ಧವಾಗಿ ಈ ಗ್ರಂಥವನ್ನು ಹೊರತರಲು ನಮ್ಮ ತಾತಪಾದರ ವಿಶೇಷಾನುಗ್ರಹಕ್ಕೆ ಪಾತ್ರರಾದ "ಸುಧಾ ಮುದ್ರಣ"ದ ಮಾಲೀಕರಾದ ಶ್ರೀಯುತ ಧನಂಜಯ ವರಪೇಡಕರ ಅವರ ಕಾರ್ಯ ಶ್ಲಾಘನೀಯವಾಗಿದೆ. ಅವರಿಗೆ ಅನೇಕ ಧನ್ಯವಾದಗಳು.

ಅನಿವಾರ್ಯವಾಗಿ ಸಂಭವಿಸಬಹುದಾದ ಮುದ್ರಣಲೋಪದೋಷಗಳನ್ನು ಮನ್ನಿಸಿ ವಾಚಕರು ಇದರ ಉಪಯೋಗ ಪಡೆದು ತನ್ಮೂಲಕ ಶ್ರೀಮದಾಚಾರ್ಯರ ಅಂತರ್ಯಾಮಿಯಾದ ಶ್ರೀವೇದವ್ಯಾಸರಲ್ಲಿ ಸಮರ್ಪಿಸುವಲ್ಲಿ ಕೃತಾರ್ಥರಾಗೋಣ.

ವ್ಯಾಸರಾಜ, ವಾಸುದೇವ, ಕೃಷ್ಣಮೂರ್ತಿ
ಪ್ರಸನ್ನಶ್ರೀ ರಾಘವೇಂದ್ರಸ್ವಾಮಿ ಮಠ
ಮುಳಬಾಗಿಲು

॥ ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಮಧ್ವೇಶಾರ್ಪಣಮಸ್ತು ॥

★ ★ ★



श्रीमज्जयतीर्थानां मूलवृन्दावनम्



श्रीश्रीपादराजतीर्थानां मूलवृन्दावनम्



श्रीव्यासराजतीर्थानां मूलवृन्दावनम्



# ಸಮರ್ಪಣೆ

ಶ್ರೀಮತಿ **ಪದ್ಮ ಮತ್ತು** ಶ್ರೀಯುತ ಡಿ. **ಕೆ.** ನಾಗರಾಜಾಚಾರ್ಯ

ಅನಾದಿಕರ್ಮಗಳ ಜಾಲ ಇದು ಸಂಸಾರ
**ಇಲ್ಲಿರುವುದು** ಅನೇಕ ವ್ಯಸನಗಳ ಸಂಚಾರ
**ತೋರುವ ಅನೇಕ** ವಸ್ತುಗಳೆಲ್ಲ ನಿಸ್ಸಾರ
**ಈ ಸಂಸಾರ** ದಾಟಲು ಬೇಕು ಸೂತ್ರಾರ್ಥಗಳ ಸಾರ
**ಅದರ ಮೇಲೆ** ಕವಿದಿತ್ತು ಕುಯುಕ್ತಿಗಳ ಪ್ರಾಕಾರ
**ಅದು** ನಾಶವಾಗಲು ಕಾರಣ ಆಚಾರ್ಯರ **ಯುಕ್ತಿ** ಪ್ರಹಾರ
**ಆ ಯುಕ್ತಿಗಳ ಪ್ರಕಾಶಕ್ಕೆ** ಶ್ರೀಮನ್ನ್ಯಾಯಸುಧಾ ಒಂದೇ ಆಧಾರ
**ಶ್ರೀ ನ್ಯಾಯಸುಧೆಯ ಗಂಧ** ಹೊರಡಲು **ಬೇಕು** ಪರಿಮಳದ ಪ್ರಸಾರ ॥

**ಇಂತಹ ಶ್ರೀಮನ್ನ್ಯಾಯಸುಧಾ** ಹಾಗೂ **ಪರಿಮಳ** ಗ್ರಂಥದ
ದ್ವಿತೀಯ **ಆವೃತ್ತಿಯನ್ನು ನಮ್ಮ ಪೂಜ್ಯ** ಮಾತಾಪಿತೃಗಳ ಅಂತರ್ಯಾಮಿಯಾದ
ಶ್ರೀಪದ್ಮನಾಭತೀರ್ಥಾದಿ **ಸಮಸ್ತ ಗುರ್ವಂತರ್ಗತ ಭಾರತೀರಮಣ** ಮುಖ್ಯಪ್ರಾಣಾಂತರ್ಗತ
ನಮ್ಮ ಕುಲಸ್ವಾಮಿಯಾದ **ಶ್ರೀಅಹೋಬಲ ಲಕ್ಷ್ಮೀನರಸಿಂಹ** ದೇವರಲ್ಲಿ ಸಮರ್ಪಿಸುತ್ತಿದ್ದೇವೆ.

ಸಜ್ಜನವಿಧೇಯ
**ವ್ಯಾಸರಾಜ, ವಾಸುದೇವ,** ಕೃಷ್ಣಮೂರ್ತಿ

### श्रीमज्जयतीर्थयतिकृता

# श्रीमन्न्यायसुधा

## श्रीमद्राघवेन्द्रतीर्थकृत'परिमळ'टिप्पणीसमेता

॥ श्रीमद्धनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः ॥

॥ श्रीगुरुभ्यो नमः ॥ हरिः ॐ ॥

**श्रीमन्न्यायसुधा—**

**श्रियः पत्ये नित्यागणितगुणमाणिक्यविशद**
**प्रभाजालोल्लासोपहतसकलावद्यतमसे।**
**जगज्जन्मस्थेमप्रलयरचनाशीलवपुषे**
**नमोऽशेषाम्नायस्मृतिहृदयदीपाय हरये ॥ १ ॥**

**परिमळः—**

पूर्णागण्यगुणोदारमूर्तये पुण्यकीर्तये। नमः श्रीपतये भक्तदत्तस्वानन्दमूर्तये ॥ १ ॥
पूर्णागण्यगुणोदारनित्यसुन्दरमूर्तिने। श्रीब्रह्मवीन्द्रपूर्वेड्यकीर्तिने ब्रह्मणे नमः ॥ २ ॥
विश्वं यस्य वशे सर्वमनिशं शङ्करादिकम्। तस्य वायोस्तृतीयांशमाश्रये शमवाप्तये ॥ ३ ॥
सत्पद्मबन्धवो यस्य गावो विश्वतमोनुदः। स स्यात् तत्त्वप्रकाशाय जयतीर्थरविर्मम ॥ ४ ॥
पदवाक्यप्रमाणज्ञो दुर्मतध्वान्तभास्करः। व्यासतीर्थमुनीन्द्रो मे भूयाज्ज्ञानसमृद्धये ॥ ५ ॥
अस्मद्देशिकपादानां प्रणम्य चरणाम्बुजम्। श्रीमन्न्यायसुधावाक्यव्याख्यां कुर्यां यथामति ॥ ६ ॥

आद्यपद्यं विवृण्वानो ग्रन्थादौ नम्यत्वप्रयोजकविशिष्टत्वेष्टत्वाधिकृतत्वयुक्तदेवतानतिरूपं मङ्गलमाचरति **श्रिय इति** ॥ मूले अशेषविशेषतोऽपीत्यनेन सङ्कल्प्य श्रीब्रह्माद्युत्तमत्वमुक्तम्। तत्र सकलवाङ्मनसदेवतायाः देव्याः ग्रन्थारम्भेऽवश्यं वन्द्यत्वद्योतनाय श्रियः पत्य इति विशिष्योक्तिः। तदपि ईश्वरोपसर्जनतयेति ज्ञापनाय श्रिय इति पृथगुक्तिः। निखिलेति निर्दोषमिति च विशेषणद्वयस्य हेतुहेतुमद्भावेन योजनाद्योतनाय नित्येत्याद्युक्तम्। 'प्रच्युतोऽशेषदोषैः सदा पूर्तित' इत्युक्तेः सर्वस्वातन्त्र्यसर्वज्ञानसर्वशक्तिसर्वैश्वर्यादिगुणसत्त्वे पारतन्त्र्यादिदोषाणामयोगात्। एतच्च ब्रह्मपदेन गुणपूर्तिवन्निर्दोषत्वस्यापि लाभाय। तेन नारायणशब्दस्य ब्रह्मशब्दसमानार्थत्वसूचनेन ब्रह्मतन्त्रे

नारायणनतिः मूले न युक्तेति शङ्का परास्ता । यद्वा लोके गुणदोषयोरविनाभावदृष्टेरिहापि गुणित्वे दोषित्वापत्तिरित्यतः मितगुणित्वे दोषित्वमत्रामितगुणित्वान्न दोषितेति सूचनायैवमुक्तिः । देहस्य ज्ञानादिगुणात्मकत्वे लोके ज्ञानादेरनित्यत्वाद्देहोऽपि तथा स्यात् इति शङ्कानिरासाय नित्येति गुणविशेषणम् । तेन मूले सदापदस्य निखिलेत्यत्रापि अन्वयः सूचितः । निर्दोषमित्यत्र दोषपदम् अशेषदोषपरमिति ज्ञापनाय सकलावद्येत्युक्तिः । अस्योद्भवादिदमित्यत्र अस्येतिपदं प्रमितसर्वपरं सदपि नेश्वरपरमिति ज्ञापनाय जगज्जन्मेत्युक्तम् । अनेनास्य समस्तस्योद्भवादिदमित्यन्वयः सूचितः । स्थेमा स्थैर्यं रक्षेत्यर्थः । उक्तं हि श्रुतप्रकाशेऽपि 'अखिलभुवनजन्मस्थेमभङ्गादिलील' इति भाष्यव्याख्यानावसरे स्थेमा स्थितिरिति । स्थिरशब्दादिमनिच्प्रत्यये प्रियस्थिरेत्यादिसूत्रेण स्थिरशब्दस्य स्थादेशे आद्गुण इति गुणे च स्थेमेति रूपम् । यद्यपि वामनवृत्त्यादौ मुग्धप्रौढस्थिरशब्दानां पृथ्वादिष्वपाठात्पृथ्वादिभ्य इमनिज्वेत्युक्तेमनिजप्राप्तेरिमनिजन्तप्रयोगोऽसाधुरिति उक्तम् । तथापि नैषधद्वादशसर्गस्थस्य 'यत्करयामपि भानुमात्र ककुभि स्थेमानमालम्बत' इत्यस्य व्याख्याने 'वर्णदृढादिभ्यः ष्यञ्च' इति सूत्रे चकारेणेमनिचः समुच्चितत्वात् स्थिरशब्दस्य दृढादिषु पाठादिमनिजित्युक्तत्वात्साधुरेवायं ध्येयः । यद्वा तिष्ठतेरौणादिकेमनिचि गुणे रूपं स्थेमेति । स्थितिरित्यर्थः । उद्भवादिदमित्यनेन सृष्ट्याद्यष्टकग्रहणेऽपि वियदधिकरणन्यायेन ईशादन्यसर्वसंबन्धित्वाज्जन्मादित्रयस्यैवात्रोक्तिः । नियतिरप्युपलक्ष्या । ईश्वरस्य जगज्जन्मादिना फलं नास्ति चेदस्योद्भवादिदमित्ययुक्तम् । प्रेक्षावतो निष्फले प्रवृत्त्ययोगात् । अस्ति चेन्निखिलपूर्णगुणेत्ययुक्तमित्यतः **शीलेति** । जन्मादिरचनास्वभावेत्यर्थः । फलाभावेऽपि स्वभावोऽयं सृष्ट्यादिव्यापारः । यथा चैतत्तथा नप्रयोजनाधिकरणे वक्ष्याम इति भावः । अनेन सदाऽस्योद्भवादिदमित्यप्यन्वयः सूचितः । मूले देहमित्युक्तिर्न केवलं ज्ञानादिगुणसत्त्वाद्युपपत्त्यर्थं किन्त्वस्योद्भवादिदमित्युक्तस्रष्टृत्वाद्युपपत्त्यर्थं चेति सूचनाय **वपुष** इत्युक्तिः । अन्यथा पत्युरसामञ्जस्यादित्यधिकरणे संबन्धानुपपत्तेश्चेति सूत्रेऽशरीरस्य जगता कर्तृकार्यभावरूपसंबन्धानुपपत्तेरिति वक्ष्यमाणदोषापत्तेरिति भावः । सुवाक्यैरित्येतद्वेदवेदानुसारिसर्वपौरुषेयापौरुषेयपरमिति भावेनोक्तम् **अशेषाम्नायस्मृतीति** । आपाततो नोक्तगुणविशिष्टो हरिः प्रतीयत इत्यत उक्तं **हृदयेति** । तात्पर्यप्रकाशितायेत्यर्थः । सदा प्रियतममित्यस्यार्थः **हरय इति** ।

नित्येत्यादिविशेषणद्वयेन विशिष्टत्वम् अशेषेत्यधिकृतत्वम् हरत्यशेषक्लेशानिति हरय इत्यनेन इष्टत्वमुक्तं ध्येयम् । 'हरिं हरन्तमनुयन्ति देवा' इत्यादेः । यद्वा मूले तमेवेति श्लोके व्यासगुरोः नारायणैक्यमुच्यते । 'प्रादुर्भूतो हरिर्व्यास' इति श्लोके च हर्यैक्यम् । तत्कथमित्यतस्तावेक एवेति ज्ञापनाय मूलोक्तनारायणविशेषणान्येवोक्त्वा हरय इति विशेष्यमुक्तम् । 'वेदाक्षराणि यावन्ति पठितानि द्विजातिभिः । तावन्ति हरिनामानी'ति स्मृतिसूचनाय हरिपदप्रयोग इत्येके । अनेन हरेर्नारायणानन्यत्वप्रतीत्या प्रादुर्भूतो हरिर्व्यास इति व्यासस्य हर्यवतारत्वोक्तेः नारायणानवतारत्वात् तमेवेति तदभेदोक्तिः अयुक्तेति शङ्काऽनवकाश इति । तमेव शास्त्रप्रभवमित्युपपत्त्यर्थमित्यन्ये । हरेर्नारायणविशेषणविशिष्टत्वोक्त्या हरिविशेषणानां कृत्यं मूलविशेषणकृत्यवद्बोध्यम् । निखिलेत्यादिविशेषणत्रये वेदादिरेव मानमिति ज्ञापनाय मूलक्रमोल्लङ्घनेनाशेषाम्नायेत्यस्यान्ते निवेशः । नित्येति विशेषणेन पूर्वाध्यायद्वयस्य अशेषेत्यादिविशेषणविशेष्याभ्याम् उत्तरद्वयस्यार्थोक्तिः । 'नासिकास्तनयोर्ध्माधेटोः' इति निर्देशादल्पाच्तरमित्यस्य प्रायिकत्वाद्वाऽभ्यर्हितत्वाद्वा आम्नायशब्दस्य पूर्वनिपातः ॥ १ ॥

सु०— येन प्रादुरभावि भूमिवलये व्यस्तारि गोसन्ततिः
प्रावोधि श्रुतिपङ्कजं करुणया प्राकाशि तत्त्वं परम्।
ध्वान्तं ध्वंसमनायि साधुनिकरश्चाकारि सन्मार्गग-
स्तेन व्यासदिवाकरेण सततं मा त्याजि मे मानसम्॥ २॥

परि०— प्रतिपाद्यं नत्वा द्वितीयपद्यस्थशास्त्रप्रभवत्वादि विवृण्वन् सूत्रकृतमभीष्टं याचते **येनेति**। गोसन्ततिरित्यनेन भारतपुराणब्रह्मसूत्रादिग्रन्थसमूहः किरणसन्ततिश्चोच्यते। प्रावोधीत्यनेन वेदप्रभवत्वं वेदव्यञ्जकत्वमेवेति दर्शितम्। गोपदश्रुतिपदयोरुक्त्या शास्त्रपदेन पौरुषेयापौरुषेयग्रन्थसङ्ग्रह इति सूचितम्। यद्वा गोसन्ततिर्ज्ञानसन्ततिरित्यादि ध्येयम्॥ २॥

सु०— व्याप्तिर्यस्य निजे निजेन महसा पक्षे सपक्षे स्थिति-
र्व्यावृत्तिश्च विपक्षतोऽथ विषये सक्तिर्न वै वाधिते।
नैवास्ति प्रतिपक्षयुक्तिरतुलं शुद्धं प्रमाणं स मे
भूयात्तत्त्वविनिर्णयाय भगवानानन्दतीर्थो मुनिः॥ ३॥

परि०— भाष्यकर्तारमभीष्टं प्रार्थयते **व्याप्तिरिति**॥ तत्त्वविनिर्णयाय इदमदो वाऽन्यदेव वा तत्त्वज्ञानमद्वैतादिज्ञानं वा तत्त्वज्ञानमिति संशयविपर्ययानास्कन्दितनिर्णीतप्रामाण्यकनिश्चयरूपतत्त्वज्ञानायेति साध्योक्तिः। प्रमाणमिति करणे ल्युट्। इतरकरणवदस्य प्रमातृप्रयोज्यत्वाभावेऽपि सर्वप्रमितिकरणमनआदिशक्तिप्रबोधकतया प्राधान्येन प्रमाहेतुत्वात् 'बृहत्तुलैऽप्यतुलै'रित्यादाविवातुलमनुपममित्यर्थः। शुद्धं निर्दोषम्।

पक्षवृत्तित्वं सपक्षे सत्त्वं विपक्षाद्व्यावृत्तिरबाधितविषयत्वं असत्प्रतिपक्षत्वं चेति अन्वयव्यतिरेकिणः पञ्च रूपाणीति तानि क्रमेणाह **व्याप्तिरित्यादिना**॥ **निजे** भक्तवर्गाख्ये पक्षे। भक्तवर्गस्य विष्णूत्कर्षादिज्ञानं वा तत्त्वज्ञानमिति तत्त्वज्ञानगोचरसन्देहवत्त्वेन विष्णूत्कर्षादिज्ञानमेव तत्त्वज्ञानं नान्यदित्येवं तत्त्वनिर्णयरूपप्रमाणफलस्य तस्मिन्सिषाधयिषितत्वेन तस्य पक्षत्वात्। स्वमाहात्म्यस्य तत्र प्रकटितत्वेन तैरवगतमाहात्म्यत्वात्तत्र सान्निध्यविशेषाद्वा निजेन महसा तं व्याप्नोतीति व्याप्तिपदेन पक्षे सर्वत्र वृत्तिरुक्ता। 'व्यावृत्तं यद्विपक्षेभ्यः सपक्षे च कृतान्वयि। व्याप्त्या पक्षे वर्तमानमन्वयव्यतिरेकि तदि'त्युक्तेः। सपक्षे हरौ इदमदो वेति सन्देहानास्कन्दितानुपचरिततत्त्वनिर्णयवति, स्थितिः निष्ठा न तु तत्र व्याप्तिः, हरिविषये कृत्स्नाविषयत्वात्, ईशादन्यत्रैवालोचने सर्वविषयकत्वादिति भावः। विपक्षतः उक्तरूपतत्त्वनिर्णयहीनायोग्यजनेभ्यः, व्यावृत्तिः उपदेशादावप्रवृत्तिः बाधिते निषिद्धे विषये सक्तिः सङ्गो नैवास्तीति अवधारणे प्रसिद्धिद्योतको वा वैशब्दः, भ्रान्तिशून्य इति वार्थः; ऋजुज्ञानस्य यथार्थैकस्वभावत्वात्। प्रतिपक्षयुक्तिः प्रतिवादियोगः। स नैव, प्रतिभटशून्य इत्यर्थः॥

वेदभारतबौद्धादिग्रन्थाः पक्षसपक्षविपक्षा इत्येके॥ ३॥

सु०— भवति यदनुभावादेडमूकोऽपि वाग्मी
जडमतिरपि जन्तुर्जायते प्राज्ञमौलिः ।
सकलवचनचेतोदेवता भारती सा
मम वचसि निधत्तां सन्निधिं मानसे च ॥ ४ ॥

**परि०—** देवीं सरस्वतीं व्यासमिति शिष्टाचारशिक्षामनुसृत्य वायुपत्नीसन्निधिमर्थयते **भवतीति** ॥ एडमूकः वक्तुं श्रोतुमशक्तः 'जडोऽज्ञ एडमूकस्तु वक्तुं श्रोतुमशिक्षितः' इत्यमरोक्तेः । किम्वनीदृश इति कैमुत्यार्थोऽपिशब्दः । वाग्मित्वभवने प्राज्ञमौलित्वभवने च हेतुः **सकलवचनचेतोदेवतेति** ॥ ४ ॥

सु०— रमानिवासोचितवासभूमिस्सन्न्यायरत्नावलिजन्मभूमिः ।
वैराग्यभाग्यो मम पद्मनाभतीर्थामृताब्धिर्भवताद्विभूत्यै ॥ ५ ॥

**परि०—** प्राचीनटीकाकारादभीष्टमाशास्ते **रमेति** ॥ सन्न्यायरत्नावल्याः अनुव्याख्यानटीकाग्रन्थस्य जन्मभूमिः जनक इत्यर्थः । अब्धिपक्षे वैराग्यं शौक्ल्यं ध्येयम् ॥ ५ ॥

सु०— पदवाक्यप्रमाणज्ञान् प्रतिवादिमदच्छिदः ।
श्रीमदक्षोभ्यतीर्थाख्यानुपतिष्ठे गुरून्मम ॥ ६ ॥

**परि०—** स्वगुरून्नमति **पदेति** ॥ शब्दमीमांसान्यायशास्त्रज्ञानित्यर्थः । उपतिष्ठे मनसा पूजयामि । 'उपान्मन्त्रकरण' इति सूत्रे 'उपाद्देवपूजासङ्गतिकरणमित्रकरणपथिष्वि'ति वार्तिकेन पूजायामात्मनेपदम् ॥ ६ ॥

सु०— श्रीमदानन्दतीर्थार्यसन्मनःसरसीभुवि ।
अनुव्याख्याननलिने चञ्चरीकति मे मनः ॥ ७ ॥

**परि०—** स्वचिकीर्षितं व्यनक्ति **श्रीमदिति** ॥ सन्मनोरूपसरस्यां सरोवरे भुवि जात इत्यर्थः । 'तृतीयादिषु भाषितपुंस्कं पुंवद्गालवस्ये'ति पुंवद्भावः । अनुव्याख्यानाख्यकमले चञ्चरीकति चञ्चरीकवद् भ्रमरवत् आचरति । 'इन्दिन्दिरभ्रमरषट्पदचञ्चरीका' इत्यादि शब्दरत्नाकरोक्तेः । इन्दिन्दिरश्चञ्चरीक इति काचित्कामरपाठः प्रक्षिप्तः, अनेककोशेष्वदर्शनात्, तद्व्याख्यातृभिरस्पृष्टत्वाच्च । अनेकधा व्याख्यातुं मनः प्रवर्तत इत्यर्थः । आचारार्थात्क्विबन्ताच्चञ्चरीकशब्दात्तिङ्प्रत्ययः ॥ ७ ॥

सु०— न शब्दाब्धौ गाढा न च निगमचर्चासु चतुरा
न च न्याये प्रौढा न च विदितवेद्या अपि वयम् ।
परं श्रीमत्पूर्णप्रमतिगुरुकारुण्यसरणिं
प्रपन्ना मान्याः स्मः किमपि च वदन्तोऽपि महताम् ॥ ८ ॥

**परि०**— चञ्चरीकतीत्युक्त्या प्राप्तं स्वमहत्त्वं विनयेन भूषयितुं विनयप्रदर्शनं करोति **न शब्देति** । निगमचर्चासु वेदविचारेषु । क्वचिदपि चेन्न प्रौढिस्तर्हि किं बलं व्याख्यान इत्यत आह **परमिति** ॥ अन्यद्बलमस्तीत्यर्थः । तत्किं गुरुकारुण्यसरणिं प्रपन्ना इति यत्तदेव बलम् । अतो मान्या इत्यन्वयः । एतेन अग्रे वक्ष्यमाणं सर्वं मूलाभिप्रेतमिति ध्वनितम् । किमपि साध्वसाधु वेत्यर्थः । विनयोक्तिरेवैषा । वस्तुतो मयि गुरुकारुण्यसरणिप्रतिपत्तिलब्धशब्दाब्ध्यवगाहादयो व्याख्यानप्रयोजकीभूता धर्माः सन्तीति स्वगतव्याख्योपयुक्तधर्मबाहुल्याभिप्रायेण बहुवचनोक्तिः । यद्वा गाढा इत्यादेः निषेधप्रतियोगितया प्रपन्ना इत्यस्य मान्यत्वोपपादकतयोपात्तत्वेन मान्यत्वादेः विधेयतया च वयमित्येतदविशेषणत्वेन सविशेषणस्य तु नेति निषेधाप्रवृत्तेरस्मदो द्वयोश्चेत्येकस्मिन्नपि बहुवचनं ध्येयम् । श्लोकानां च वक्तव्यबहुत्वेऽपि ग्रन्थगौरवभयात्सङ्क्षेपः ॥

(प्रत्यक्षरं) प्रतिवाक्यं प्रतिपदमनेकाकूतगर्भिता ।
प्रतिभाति सुधाऽथापि ग्रन्थाल्पत्वाय नोच्यते ॥ ८ ॥

**सु०— भगवता बादरायणेन प्राणिनां निःश्रेयसाय प्रणीतमपि ब्रह्ममीमांसाशास्त्रं असाधुनिबन्धान्धतमसाऽवकुण्ठितत्वेन अप्रणीतमिव मन्यमानो भगवानानन्दतीर्थमुनिः यथाऽऽचार्याभिप्रायम् अस्य भाष्यं विधाय अनुभाष्यमपि करिष्यन् विलीनप्रकृतितया स्वयमन्तरायविधुरोऽपि अनवरतमीश्वरप्रवणकायकरणवृत्तिरपि नारायणप्रणामादिकं प्रारिप्सितस्यानन्तरायपरिसमाप्तेः प्रचयस्य च हेतुतयाऽविगीतशिष्टाचारपरम्परादिना अवगतमवश्यं करणीयं शिष्यान् ग्राहयितुं ग्रन्थादौ निबध्नाति नारायणमिति ।**

**परि०**— भाष्यादिवैयर्थ्यशङ्कां निराह भगवतेत्यादिना ॥ **असाध्विति** । असमीचीनग्रन्थाख्यान्धतमसेन प्रतिबद्धतत्त्वज्ञानजननशक्तिकत्वेनाप्रणीतमिवेत्यर्थः । सूत्रकृतेः पूर्वं विद्यमानयोः साधुजनमनोगतसंशयविपर्यययोरनपगमादिति भावः ॥ **यथाचार्याभिप्रायं** सूत्रकाराभिप्रायमनतिक्रम्य ॥ **अस्य** ब्रह्ममीमांसाशास्त्रस्य ॥ **अनुभाष्यमपीति** तत्कृत्यमन्वपि चेत्यादावग्रे व्यक्तम् ॥ ग्रन्थादौ निबन्धनेन प्रणामादिकं कृतमिति तावदवगम्यते, अन्यथा तदयोगात् । तच्चेतरजनकृतमिव विघ्नविघाताद्यर्थमिति, इदानीमेव कृतमिति च प्रतीयते । तत्प्रतीतिद्वयं निरसितुं स्वयमित्याद्यप्यन्तं विशेषणद्वयम् ॥ प्रणामादिकं प्रणामस्तवनादिकम् ॥ **अविगीतेति** । अविप्रतिपन्नव्यासादिशिष्टानामाचारेण मन्वादिशिष्टानामाचार इत्येवमाचारपरम्परया तदनुमितश्रुत्यादिना चावगतमित्यर्थः ॥ श्रुत्यनुमानप्रकारश्चाग्रे 'तत्र तारेत्ये'तदवतारिकायां व्यक्तः ।

**अनुव्याख्यानम्—**

**नारायणं निखिलपूर्णगुणैकदेहं निर्दोषमाप्यतममप्यखिलैः सुवाक्यैः ।**
**अस्योद्भवादिदमशेषविशेषतोऽपि वन्द्यं सदा प्रियतमं मम सन्नमामि ॥ १ ॥**

सु०— अत्र नारायणं सन्नमामीत्यन्वयः । उत्तमपुरुषप्रयोगादेव 'अहम्' इति लभ्यते । 'सम्' इति भक्त्याद्यतिशयसाहित्यलक्षणां प्रणामस्य सम्यक्तामाह । तथाविध एव हि नारायण-प्रणामो भवत्यभिमतसिद्धेरङ्गम् । **निखिलेत्यादीनां** तु प्रणामकर्मणा नारायणेन विशेषणतया संबन्धः ।

परि०— द्वितीयान्तविशेषणानां विशेष्यद्वारा क्रियान्वयो, न साक्षादिति वक्तुं वाक्यव्यवहिततया अन्वयाप्रतीतेर्वा नारायणमित्यपि विशेषणमिति भ्रमनिरासाय विशेष्यमिति सूचनाय वाऽऽह **इत्यन्वय इति** ॥ कर्त्रनुक्तेर्न्यूनतामाशङ्क्य ममेत्यस्यैव विपरिणामेन कर्तृत्वभ्रमनिरासाय वाऽऽह **उत्तमेति** । 'अस्मद्युत्तम' इति सूत्रेऽस्मच्छब्दे उपपदत्वेन श्रूयमाणेऽश्रूयमाणे वा तदर्थविवक्षायामुत्तमपुरुषो भवतीत्युक्त्या तदविनाभावादह-मित्यस्येति भावः ॥

सु०— प्रयोजनं च स्तुतिपदानां विशेष्यप्रशंसैव । तत्रार्थिकपुनरुक्तेः स्तुतित्वमेव समाधानमवधातव्यम् ।

परि०— नन्वेतावन्ति विशेषणानि व्यर्थानि । यदि विशेष्यस्तुत्यर्थानि तथापि न कृत्यं पश्याम इत्यत आह **प्रयोजनं चेति** । प्रशंसैवेत्युक्तस्तवनं च तत्प्रीत्यर्थमिति भावः ॥ नन्वेवं गुणपदेन सार्वज्ञसर्वस्वातन्त्र्यादिगुणोक्त्या अज्ञानपारतन्त्र्यादिदोषाभावलाभान्निर्दोषमिति पुनरुक्तम्, 'जन्माद्यस्येति सूत्रेण गुणसर्वस्वसिद्धये । ब्रह्मणो लक्षणं प्रोक्तम्' इति वक्ष्यमाणदिशा अस्योद्भवादिदमित्युक्त्यैव गुणपूर्णतालाभान्निखिलपूर्णगुणेति च पुनरुक्तम्, उद्भवा-दिदमित्युक्त्या देहस्यापि लाभादेहमिति च पुनरुक्तमित्यत आह **तत्रार्थिकेति** ।

सु०— अथवा । कुतो नारायणस्य नम्यत्वम् । तथात्वेऽपि कुतोऽन्यासु देवतासु सतीषु तस्यैव नमनमिति । अत्रोक्तम्— **अशेषविशेषतोऽपि वन्द्यमिति** । विशिष्यते वस्त्वेभिरिति **विशेषाः**, असाधारणधर्माः । अशेषाश्च ते विशेषाश्च । **अपिः** अभिव्याप्तौ । यावन्तो वन्द्यत्व-निमित्तभूता धर्माः तेभ्यो विशेषेभ्योऽपि हेतुभ्यो वन्द्यम् । तथा **अशेषात्** वन्द्यत्वेन समा-शङ्कितात्पद्मापद्मभवादेर्जगतो **विशेषः** अतिशयः अशेषविशेषः सर्वोत्तमत्वम् । ततो हेतोः सतीष्वन्यासु देवतासु वन्द्यमिति ॥

एतदुभयं कथं नारायणस्येत्यतोऽभिहितम् **निखिलेत्यादि** ।

परि०— अन्यथापि स्तुतिसंभवादेतैरेव विशेषणैः स्तुतौ न किञ्चिद्बीजमित्यत आह **अथवेति** ॥ आद्यचोद्यं निरसितुमाह **विशिष्यत इति** । व्यावर्त्यत इत्यर्थः ॥ **यावन्त इति** । विशिष्टत्वेष्टत्वाधिकृतत्वरूपा इति भावः ॥ द्वितीयचोद्यं निराह **तथेत्यादिना** ॥ **पद्मेति** । श्रीब्रह्मादेरित्यर्थः । **एतदुभयमिति** । वन्द्यत्वप्रयोजकासाधारणधर्मवत्त्वं, सर्वोत्तमत्वं चेत्येतदुभयमित्यर्थः ॥ **निखिलेत्यादीति** । विशेषणपञ्चकमित्यर्थः ।

